# ಸಿದ್ಧಗಂಗಾ



ದಯವಿಲ್ಲದ ಧರ್ಮದಾವುದಯ್ಯಾ,
ದಯವೇಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ,
ದಯವೇ ಧರ್ಮದ ಮೂಲವಯ್ಯ
ಕೂಡಲ ಸಂಗಮದೇವ.

ಏಪ್ರಿಲ್-1980

# 'ಸಿದ್ದಗಂಗಾ' ಚಿರಾಯುವಾಗಲೆಂದು

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

732. ಶ್ರೀ ವಿ. ಸುಂದರಪ್ಪ
ಬಳ್ಳಗೆರೆ, ಮಳವಳ್ಳಿ ತಾ॥ ಮಂಡ್ಯ ಜಿಲ್ಲೆ.

733. ಶ್ರೀ ಹೆಚ್. ಸಿ. ರಾಜಶೇಖರಮೂರ್ತಿ
ಕರಿಸಿದ್ದೇಶ್ವರ ಮಠ, ಹೊನ್ನವಳ್ಳಿ
ತಿಪಟೂರು ॥ತಾ॥, ತುಮಕೂರು ಜಿಲ್ಲೆ.

734. ಶ್ರೀ ವೈ. ಬಿ. ಸಿದ್ಧಲಿಂಗಯ್ಯ
S/o ಶ್ರೀ ಬಸಣ್ಣ
ಎಲದಡ್ಲು, ತುಮಕೂರು ॥ತಾ॥

735. ಶ್ರೀ ಶ್ರೀ ಮಹಾಂತ ಸ್ವಾಮಿಗಳು
ದೊಡ್ಡಕೊಡ್ಲಿ ಕಲ್ಮಠ, ಉತ್ತರ ಕೊಡಗು.

736, ಶ್ರೀ ಬಿ ಕೆ. ಜೋಶಿ, ಇಂಜಿನಿಯರ್.
ರೋಡಲ್ ಬಂಡ್, ರಾಯಚೂರು ಜಿಲ್ಲೆ.

737 ಶ್ರೀಮತಿ ಸಿದ್ಧಗಂಗಮ್ಮ
W/o ಶ್ರೀ ಪಿ. ಎಸ್. ಹುಚ್ಚವೀರಪ್ಪ.
ಅಸಿಸ್ಟೆಂಟ್ ಎಗ್ಸಿಕ್ಯುಟಿವ್ ಇಂಜಿನಿಯರ್,
ಕೃಷ್ಣಾ ಪ್ರಾಜೆಕ್ಟ್ ಮೆಕ್ಯಾನಿಕಲ್ ಸಬ್
ಡಿವಿಜನ್,ರೋಡ್‌ಬಂಡಲ್. ರಾಯಚೂರು ಜಿಲ್ಲೆ

738. ಮೆ॥ ಮೈಸೂರು ಕನ್‌ಸ್ಟ್ರಕ್ಷನ್ ಕಂಪನಿ,
ಯು. ಕೆ. ಪಿ. ಡಾಮ್ ಡಿವಿಜನ್.
ರೋಡಲ್ ಬಂಡ್, ರಾಯಚೂರು ಜಿಲ್ಲೆ.

739. ಶ್ರೀ ಡಿ. ಸಿ. ವಿಜಯೇಂದ್ರಯ್ಯ,
ಡೆಂಕಣ ಕೋಟೆ, ಧರ್ಮಪುರಿ ಜಿಲ್ಲೆ,
ತಮಿಳುನಾಡು.

740. ಶ್ರೀ ಕೆ. ಸಿ. ಪಂಚಾಕ್ಷರಯ್ಯ
ಉಮಾಶಂಕರ್ ಟ್ರಾನ್ಸ್ ಪೋರ್ಟ್,
ಕೀಲ್ ಪಾರ್ಕ್, ಮದ್ರಾಸ್-10

741. ಶ್ರೀ ಶ್ರೀ ಶಂಕರ ಸ್ವಾಮಿಗಳು, ವಿರಕ್ತ ಮಠ
ಶೇಗುಣಸಿ, ಅಥಣಿ, ಬೆಳಗಾಂ ಜಿಲ್ಲೆ.

742. ಶ್ರೀ ಎಸ್. ಮಹದೇವಯ್ಯ
ಎಕ್ಸಿಕ್ಯುಟಿವ್ ಇಂಜಿನಿಯರ್.
ಶ್ರವಣಬೆಳಗೊಳ, ಹಾಸನ ಜಿಲ್ಲೆ.

743. ಶ್ರೀ ಸೋಮಶೇಖರಯ್ಯ. ಬಿ.ಡಿ.ಒ.,
ಅಜ್ಜರಕಾಡು, ಉಡುಪಿ.
ದಕ್ಷಿಣಕನ್ನಡ ಜಿಲ್ಲೆ.

744. ಶ್ರೀ ಎಸ್. ಡಿ. ಗಂಗಾಧರಪ್ಪ
S/o ಶ್ರೀ ಸಿದ್ಧರಾಮಣ್ಣ
ಸೊಕ್ಕೆ, ಚಿಕ್ಕಮಂಗಳೂರು ಜಿಲ್ಲೆ.

745. ಶ್ರೀ ಬಿ. ಎಂ. ರಾಜಶೇಖರಯ್ಯ
ಎಲೆಕ್ಟ್ರಿಕ್ ಕಂಟ್ರಾಕ್ಟರ್
ದೇವನಹಳ್ಳಿ, ಬೆಂಗಳೂರು ಜಿಲ್ಲೆ.

746 ಶ್ರೀ ಬಿ. ವಿ. ನಾಗರಾಜ್
S/o ಬಿದಲೂರು ಶ್ರೀ ವೀರಭದ್ರಶೆಟ್ಟಿ
ದೇವನಹಳ್ಳಿ, ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)



# ಶ್ರೀವಾಣಿ

ಮನುಷ್ಯನ ಮೂರು ಮೂಲಭೂತವಾದ ಹಕ್ಕುಗಳ (ಅನ್ನ, ಬಟ್ಟೆ, ವಸತಿ) ಪ್ರಾಪ್ತಿಗಾಗಿ ಅವನು ಸರ್ವ ಪ್ರಯತ್ನವನ್ನೂ ಮಾಡಲೇಬೇಕು. ಇದುವೇ ಧರ್ಮದ ಸಂದೇಶ. ಮಾನವನು ಚರಮ ಗುರಿಯನ್ನು ಮುಟ್ಟಲು ಯೋಗ್ಯ ಸಾಧನೆ ಮಾಡಬೇಕಾದರೂ ಸಹ ಧರ್ಮ ಜೀವನವು ಮುಖ್ಯವೆಂಬುದಾಗಿ ಧರ್ಮವು ಸಾರುತ್ತಿದೆ. ಬಟ್ಟ ಬಯಲಾದ ಹಾಳು ಭೂಮಿಯಲ್ಲಿ ಪಾರಮಾರ್ಥಿಕತೆಯು ಹುಲುಸಾದ ಬೆಳೆಯು ಬೆಳೆಯಲಾರದು. ಅಂತಯೇ ಅನಾದಿ ಕಾಲದಿಂದಲೂ ಮಾನವನ ಇಹ ಜೀವನದ ಅಂದವಾದ ಬಾಳಿಗೆ ಬೇಕಾದ ಸೌಕರ್ಯಗಳನ್ನು ಸಹಾಯ ಸಂಪತ್ತುಗಳನ್ನು ಸತ್ಯವಾದ, ಪ್ರಾಮಾಣಿಕವಾದ ರೀತಿಯಿಂದ ಗಳಿಸಿ ಬಳಸುವುದೇ ಅವನ ಜೀವನೋದ್ದೇಶಗಳಲ್ಲಿ ಮುಖ್ಯವಾದುದೆಂದು ಧರ್ಮ ಸಂಸ್ಥಾಪಕರು ಉಪದೇಶಿಸಿದ್ದಾರೆ. ಈ ಅಭಿಪ್ರಾಯವನ್ನೇ ಬೇರೊಂದು ರೀತಿಯಿಂದ ಹೇಳುವುದಾದರೆ ಮನುಷ್ಯನು ಪವಿತ್ರ ಮಾನವ ದೇಹಾವಲಂಬಿಯಾಗಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬುವ ಪುರುಷಾರ್ಥ ಚತುಷ್ಟಯವನ್ನು ಸಾಧಿಸಬೇಕು. ದೇಹಾನಂತರ ದೇವ ದೇವನಲ್ಲಿ ಆತ್ಮಕ್ಕೆ ವಿಶ್ರಾಂತಿಯನ್ನು ಹೊಂದುವ ಮೋಕ್ಷದ ಮಾತು ಹಾಗಿರಲಿ ಇಹ ಜೀವನದ ಮುಖ್ಯ ಧ್ಯೇಯಗಳಾದ ಧರ್ಮ ಅರ್ಥ ಕಾಮಗಳ ಸ್ವರೂಪವನ್ನು ಸ್ಥೂಲವಾಗಿ ಪರಿಶೀಲಿಸಿದರೆ ದಿವ್ಯ ತತ್ತ್ವವೊಂದು ಗೋಚರವಾಗುತ್ತದೆ. ಮನುಷ್ಯರಿಗೆ ಅರ್ಥಬೇಕು, ಕಾಮಬೇಕು ಆದರೆ ಅರ್ಥಕಾಮಗಳು ಧರ್ಮಾಧೀನವಾಗಿರಬೇಕು. ಧರ್ಮ ಸೂತ್ರಕ್ಕನುಗುಣವಾಗಿ ಇವುಗಳ ಗಳಿಕೆ ಬಳಕೆಗಳು ಯೋಗ್ಯವಾಗಿರಬೇಕು. ಎಲ್ಲಿಯವರೆಗೆ ಧರ್ಮದ ಪ್ರಭುತ್ವದಲ್ಲಿ ಇವುಗಳ ಗಳಿಕೆ ವ್ಯವಹರಿಸುತ್ತದೆಯೋ ಅಲ್ಲಿಯವರೆಗೆ ವ್ಯಕ್ತಿ ಜೀವನದಲ್ಲಿ, ಸಾಮಾಜಿಕ ಜೀವನದಲ್ಲಿ ಸುಖ ಶಾಂತಿ ಸಂಪದ್ವೃದ್ಧಿಗಳುಂಟಾಗಿ ಕಲ್ಯಾಣವಾಗುತ್ತದೆ. ಯಾವಾಗ ಧರ್ಮದ ಕಟ್ಟಳೆಯನ್ನು ಮೀರಿ ಈ ಅರ್ಥಕಾಮಗಳು ಸ್ವಚ್ಛಂದವಾಗಿ ವ್ಯವಹರಿಸಲು ಆರಂಭವಾಗುತ್ತವೆಯೋ ಆಗಲೇ ವ್ಯಕ್ತಿ, ಸಮಾಜ, ಹಾಗೂ ರಾಷ್ಟ್ರ ಜೀವನದಲ್ಲಿ ಅಶಾಂತಿ, ಗೊಂದಲ, ಅಸಮಾಧಾನಗಳು ತಾಂಡವಾಡುತ್ತವೆ.

# 'ಸಿದ್ಧಗಂಗಾ'

ಏಪ್ರಿಲ್ ೧೯೮೦

ಸಂಪುಟ-೧೬ ಸಂಚಿಕೆ-೪

ಪ್ರಕಾಶಕರು

ಎಚ್. ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ
ಟಿ. ಎನ್. ಚಂದ್ರಶೇಖರಯ್ಯ,
ವಿರೂಪಾಕ್ಷಯ್ಯ,
ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ 572104 ತುಮಕೂರು ಜಿಲ್ಲೆ.

# ಸಂಪಾದಕೀಯ

ಭಾರತೀಯ ಧರ್ಮ ಇತಿಹಾಸಕ್ಕೆ ಜಗತ್ತಿನಲ್ಲಿ ಒಂದು ಸ್ಥಾನವಿದೆ. ಕಾರಣ ಜಗತ್ತಿಗೆ ಧರ್ಮ ಸಂದೇಶ ವನ್ನು ಕೊಟ್ಟವರು ನಮ್ಮ ಭಾರತೀಯರು. ಭಾರತೀಯ ಧರ್ಮ ಸಂಪ್ರದಾಯದವರು- ಧರ್ಮ ಮಾನವನ ಬದು ಕಿನಲ್ಲಿ ಹಾಸು ಹೊಕ್ಕಾಗಿ ವ್ಯಾಪಿಸಿರುತ್ತದೆ. ಮಾನವನ ಸಮಗ್ರ ಹಾಗೂ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನ ವಹಿಸುತ್ತದೆ. ಮತ್ತು ಧರ್ಮ ವ್ಯಕ್ತಿಯ ಬದುಕಿನ ಎಲ್ಲ ರಂಗದಲ್ಲಿಯೂ ತಳಹದಿಯಾಗಿ ನಿಂತು ಕಾರ್ಯ ನಿರ್ವಹಣೆಯನ್ನು ಮಾಡುತ್ತದೆ. ಆಗ ವ್ಯಕ್ತಿಯು, ಸಮಾಜದ ವ್ಯವಹಾರ ಸುಭದ್ರವಾಗುತ್ತದೆ. ಧರ್ಮದ ಬೆಂಬಲ ಮತ್ತು ಆಡಿಪಾಯ ರಹಿತ ವ್ಯಕ್ತಿಯಾಗಲೀ ಸಮಾಜವಾಗಲೀ ಅಸ್ತವ್ಯಸ್ತವಾಗಬೇಕಾಗುತ್ತದೆ. ಶಾಂತಿ, ಸಂಮೃದ್ಧಿ ಗಳು ನಶಿಸಿ ದೇಶ ದುರ್ಬರ ಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಹೀಗಾಗಿ ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾ ನದ ಪೂರ್ವಾರ್ಧದಲ್ಲಿ ಅಂದಿನ ಧಾರ್ಮಿಕ, ರಾಜಕೀಯು ಮತ್ತು ಸಾಮಾಜಿಕ ಪರಿಸ್ಥಿತಿಗಳು ಶೋಚನೀಯ ಸ್ಥಿತಿಯಲ್ಲಿ ದ್ದುವು. ಧರ್ಮ ಜನ ಜೀವನದ ತಳಹದಿ, ಜೀವನದ ಮಾರ್ಗದರ್ಶಕ, ಬದುಕಿನ ನಡೆಗೆ ಧರ್ಮ ಪ್ರೇರಿತವಾಗಬೇಕಾ ದುದು ಜನ ಜೀವನದ ವಿನಾಶಕಾರಿಯಾಗಿ ಪರಿಣಮಿಸಿತು. ಧರ್ಮಕ್ಕೆ ಜಾಡ್ಯದ ಗ್ಲಾನಿ ಆವರಿಸಿಕೊಂಡಿತು. ಸನಾತನ ಯಜ್ಞಯಾಗ, ಪ್ರಾಣಿಬಲಿ, ತಾತ್ವಿಕ ಚರ್ಚೆ ತಾಂತ್ರಿಕ ಕರ್ಮಗಳ ಆಚರಣೆಗಳ ನಡವಳಿಕೆಗೆ ಜನ ಬೇಸತ್ತಿತ್ತು. "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮ ವಿಭಾಗಶಃ" ಎಂಬ ಆದರ್ಶ ತತ್ವವಾಗಿಯೇ ಉಳಿಯಿತು. ಆತ್ಮೋ ನ್ನತಿಗೆ, ಆಧ್ಯಾತ್ಮಿಕ ಸಾಧನೆಗಳು ಕುಲ, ಮತ, ಜಾತಿಗಳ ತಾರತಮ್ಯಕ್ಕೆ ಎಡೆಗೊಟ್ಟಿತು.

ಉಚ್ಚ-ನೀಚ, ಬಡವ-ಬಲ್ಲಿದ, ಗಂಡು-ಹೆಣ್ಣು, ಸ್ಪೃಶ್ಯ=ಅಸ್ಪೃಶ್ಯ ಎಂಬ ಸಮಾಜ ಘಾತಕ ಭಾವನೆಗಳು ಬಲಿತುವು. ಸಮಾಜದಲ್ಲಿ ತಾಂಡವ ವಾಡಿ ಭೇದ ಭಾವನೆಯ ಬೀಜಗಳನ್ನು ಬಿತ್ತಿದುವು. ಜನ ಜೀವನದ ಸಾಮೂ ಹಿಕ ಏಕತೆ ಒಡೆದು ಛಿದ್ರವಾಯಿತು. ಸಂಕುಚಿತ ಭಾವನೆಗಳು ಬೆಳೆದು, ಸ್ವಾರ್ಥ, ಡಂಬಾಚಾರ ಶೋಷಣೆಗಳು ಅಧಿಕಗೊಂಡವು. 'ಸರ್ವೇ ಜನಾಃ ಸುಖಿನೋಭವಂತು' ಎಂಬ ಸನಾತನ ಧರ್ಮದ ಸರ್ವ ಹಿತದೃಷ್ಟಿ ಹಿಮ್ಮೆಟ್ಟಿ ವ್ಯಕ್ತಿಯ ಪೂರ್ಣ ವಿಕಾಸಕ್ಕೆ ಸಮಾಜದ ಭೇದದ ಕೃತಕ ಗೋಡೆಗಳು ಅಡ್ಡಬಂದವು. ಬಾಳಿನ ಸಾರ್ಥಕತೆಗಿಂತ ಸಂಕುಚಿತ ಹಿತಾಸಕ್ತಿಗಳ ಹಾವಳಿಯಿಂದ ಜನತೆ ಕಂಗೆಟ್ಟಿತು. ಇಂತಹ ಸಾಮಾಜಿಕ ಅಸ್ತವ್ಯಸ್ತಗಳಿಗೆ ಅಂದಿನ ರಾಜ ಕೀಯ ವಾತಾವರಣವು ಗಾಳಿ ಹಾಕಿತು. ಅರಸು ಸಾಮಂತ-ಮಾಂಡಲಿಕರಲ್ಲಿಯ ಮತ್ತು ಅರಸು ಮನೆತನಗಳಲ್ಲಿಯ ಅಂತಃಕಲಹಗಳು. ಹಲವು ಜಾತಿಗಳ ವೈಶಮ್ಯ ಕಲಹಗಳು ಉತ್ತರದ ಮಹಮದೀಯರ ದಾಳಿಗಳಿಗೆ ಸ್ವಾಗತ ನೀಡಿ ದವು. ಕನ್ನಡ ನಾಡಿನಲ್ಲಿ ಮಹಮದೀಯರ ದಾಳಿಗಳಿಗೆ ಸ್ವಾಗತ ನೀಡಿದುವು. ಕನ್ನಡ ನಾಡಿನಲ್ಲಿ ಮಹಮದೀಯರ ವಿಜಯ, ದೇವಾಲಯಗಳ ನಾಶ, ಆಸ್ತಿ ಸಂಪತ್ತುಗಳ ಲೂಟಿ, ಸ್ತ್ರೀಯರ ಮೇಲಾದ ಅತ್ಯಾಚಾರ, ಹಿಂದುಗಳನ್ನು ಮುಸಲ್ಮಾನ ಧರ್ಮಕ್ಕೆ ಮತಾಂತರ ಗೊಳಿಸುವ ಬಲಾತ್ಕಾರ ಪ್ರವೃತ್ತಿಗಳು ಸಮಾಜದಲ್ಲಿ, ಜನತೆಯಲ್ಲಿ ಭಯ ಭೀತಿ ಯನ್ನುಂಟು ಮಾಡಿದವು. ಜನತೆಯು ಜೀವನದಲ್ಲಿ ಬದುಕುವ ಆಸೆಯನ್ನು ತೊರೆಯಿತು. ಅಂದಿನ ಕಾಲವು ಅಶಾಂತಿಯ ತವರಾಯಿತು. ಒಟ್ಟಿನಲ್ಲಿ ಹೇಳುವುದಾದರೆ ಬದುಕಿನ ಬುಡವೇ ಅಲುಗಾಡಿತು. ಇಂತಹ ತೀರ ಹದಗೆಟ್ಟ ಕಾಲವು ಸಾಮಾಜಿಕ ಕಲುಷಿತವನ್ನು ಹದಗೊಳಿಸಲು ವೀರಶೈವ ಆಂದೋಲನಕ್ಕೆ ನಾಂದಿಯಾಯಿತು. ಈ ಮಾತು ಐತಿಹಾ .ಸಿಕ ಸತ್ಯವಾದುದು.

ಧರ್ಮಕ್ಕೆ ಗ್ಲಾನಿಯೊದಗಿದಾಗ, ಅದರ ಪುನರುಜ್ಜೀವನಕ್ಕಾಗಿ ಐತಿಹಾಸಿಕ ಆವಶ್ಯಕರ್ವೋ ಎಂಬಂತೆ ಜಗತ್ತಿ ನಲ್ಲಿ ಅನೇಕ ಮಹಾಪುರುಷರು, ಧರ್ಮದೀಪಕರು, ಜನಿಸುತ್ತಾರೆಂಬ ಮಾತು ಸುಳ್ಳಲ್ಲ. ಹನ್ನೆರಡನೆಯ ಶತಮಾನ ದಲ್ಲಿ ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಗಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದಾಗ, ಭಗ ವಾನ್ ಭಕ್ತಿ ಭಂಡಾರಿ ಬಸವಣ್ಣನವರ ಉದಯವಾಯಿತು. ಅವರ ಉದಯ ಕನ್ನಡ ನಾಡಿನ ಪೂರ್ವ ಪುಣ್ಯಾದಿಗಂ ತದಲ್ಲಿ ಹೊಸ ಭಾಸ್ಕರನ ಉದಯವಾದಂತಾಯಿತು. ಬಾಳಿನ ವಿಷಮ ಚಕ್ರದ ಸುಳಿಯಲ್ಲಿ ಸಿಕ್ಕಿ ಗಾಸಿಗೊಂಡ ಜನ

ತೆಯನ್ನು ಮೇಲೆತ್ತಲು ಅಣ್ಣ ಬಸವಣ್ಣನವರು ಕಂಕಣ ಬದ್ಧರಾದರು. ವ್ಯಾವಾರಿಕ ತೀವ್ರ ಲಾಭದ ಆಸೆಯಿಂದ ಮಡಿಕೆ, ಮರ, ಕಲ್ಲು, ಮಾರಿ, ಮಾಸಣಿ ಎಂಬವುಗಳೇ ದೇವರೆಂದು ನಂಬಿ, ಆರಾಧಿಸಿ ಮೊರೆಹೊಕ್ಕ ಜನತೆಯನ್ನು ಎಚ್ಚರಿಸಿದರು. ಧರ್ಮದ ಹೆಸರಿನಲ್ಲಿ ಸ್ವಾರ್ಥ ಸಾಧನೆಯ ಮುಖವಾಡವನ್ನೂ ಧರಿಸಿ ಸಮಾಜದ ಶೋಷಣೆಯಲ್ಲಿ ನಿರತರಾದ ಸ್ವಾರ್ಥ ಸಾಧಕರನ್ನು ಕಟುವಾಗಿ ಟೀಕಿಸಿದರು. ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಅನಾಚಾರ ಹಿಂಸಾಚಾರಗಳನ್ನು ತಪ್ಪಿಸಿದರು. ಹಿಂದೂ ಧರ್ಮಕ್ಕೆ ತಗುಲಿದ್ದ ಕಳಂಕವನ್ನು ನಿರ್ನಾಮ ಮಾಡಿದರು. ' ದೇವನೊಬ್ಬ ನಾಮ ಹಲವು " ಎಂಬ ಏಕೋಪಾಸನೆಯನ್ನು ಬಿತ್ತರಿಸಿದರು. ' ಅರಿದಡೆ ಶರಣ, ಮರೆತರೆ ಮಾನವ ' ಎಂಬ ಅರಿವನ್ನು ಮೂಡಿಸಿದರು. ಸಕಲ ಜೀವರಾಶಿಗಳಿಗೆಲ್ಲ ಲೇಸನೇ ಬಯಸುವುದು ಧರ್ಮ. ದಯುವೇ ಧರ್ಮದ ಮೂಲವಯ್ಯ ಎಂಬ ಸನಾತನ ಹಿಂದೂ ಧರ್ಮದ ನಿಜತತ್ವವನ್ನು ಸರಳ ರೀತಿಯಿಂದ ಬೋಧಿಸಿದರು ಇಹ-ಪರಗಳು ಬೇರೆ ಬೇರೆಯಲ್ಲ ಎರಡೂ ಪೂರಕಗಳು, ಒಂದು ನಾಣ್ಯದ ಎರಡು ಮುಖಗಳು. " ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು" ಪರಲೋಕದ ಸೌಖ್ಯಕ್ಕೆ ಇಹಲೋಕದ ಸೌಖ್ಯ ಮುಖ್ಯವೆಂದು ಆಚರಿಸಿ ತೋರಿಸಿದರು. ವ್ಯಕ್ತಿಗತ ಆತ್ಮೋನ್ನತಿಗೆ ಸನ್ಯಾಸವೇ ಮುಖ್ಯ, ಸಂಸಾರದಿಂದ ದೂರ ಸಿಡಿದು ಹೋಗುವ ಪ್ರವೃತ್ತಿ ಹೇಡಿತನ. "ಹೇಡಿಂಗೆ ಸುಖವಿಲ್ಲ." "ಹಾವಿನ ಹಲ್ಲು ಕಳೆದ ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ. " ಎಂದು ತಿಳಿಯಪಡಿಸಿದರು. ದೇವರ ಧ್ಯಾನ, ಧರ್ಮದ ಸಾತ್ವಿಕ ಆಚರಣೆಗಳಿಗೆ ಸಮಾಜ ಜೀವನದ ವ್ಯವಹಾರಗಳಿಗೆ ಕುಲ ಜಾತಿಗಳು ಅಡ್ಡಬಾರವು. ಜಾತಿ ಕುಲ ದೇವನಿರ್ಮಿತವಲ್ಲ ಅವು ಮಾನವ ನಿರ್ಮಿತ, ಜಾತಿ ಹುಟ್ಟಿನಿಂದಲ್ಲ. ಉದ್ಯೋಗದಿಂದ. ಜೀವನ ನಡೆಸಲು, ದಾಸೋಹ ಮಾಡಲು ಕಾಯಕ ಅವಶ್ಯ. " ಕಾಯಕವೇ ಕೈಲಾಸ " ವೆಂಬ ಬೀಜ ಮಂತ್ರವನ್ನು ಸಾರಿದರು. ವೃತ್ತಿಗೂ, ಜಾತಿಗೂ, ಭಕ್ತಿಗೂ ಸಂಬಂಧವಿಲ್ಲೆಂಬ ಸೂತ್ರ ಸರ್ವ ಮಾನ್ಯತೆಯನ್ನು ಪಡೆಯಿತು- ಕಾಯಕದಲ್ಲಿ ದುರಾಸೆ ಸಲ್ಲದು ಕಾಯಕದ ಹಾದಿ ಸತ್ಯ ನಿಷ್ಠವಾಗಿರಬೇಕು. ಹೀಗೆ ಸಾಮಾಜಿಕ ಜೀವನವನ್ನು ಹಸನುಗೊಳಿಸುವ ಕಾರ್ಯದಲ್ಲಿ ಉದ್ಯುಕ್ತರಾದರು. ಧಾರ್ಮಿಕ ಸಮಾನತೆಯೊಂದಿಗೆ ಸಾಮಾಜಿಕ ಸ್ವಾತಂತ್ರ, ವಿಚಾರ ಸ್ವಾತಂತ್ರ್ಯ, ಸಮತಾಭಾವ, ಪರಸ್ಪರ, ಭಾತೃಭಾವ, ಸ್ವಾವಲಂಬನ ಪ್ರವೃತ್ತಿಗಳನ್ನು ಕಾರ್ಯಗತಗೊಳಿಸಿದರು. ಅಸ್ಪೃಶ್ಯತಾ ನಿವಾರಣೆ ಮಾಡಿದರು. ದೀನ ದಲಿತರನ್ನಪ್ಪಿಕೊಂಡರು. ಅಸ್ಪೃಶ್ಯತಾ ನಿವಾರಣೆ, ಹರಿಜನ ಗಿರಿಜನರ ಉದ್ಧಾರವೇ ನಮ್ಮ ನಾಯಕತ್ವದ ಮುಖ್ಯ ಗುರಿ ಎಂದು ವೇದಿಕೆಯ ಮೇಲೆ ನಿಂತು ಇಂದು ಮಾತನಾಡುವ ರಾಜಕಾರಣಿಗಳು ಅಸ್ಪೃಶ್ಯತೆಯನ್ನು ನಿವಾರಿಸಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯ ಬಂದು ಮೂವತ್ತೆರಡು ವರ್ಷಗಳು ಕಳೆದರೂ, ರಾಜ್ಯಾಂಗದಲ್ಲಿ ಅಸ್ಪೃಶ್ಯತೆ ನ್ಯಾಯಬಾಹಿರವೆಂದೇ ಅಚ್ಚುಗೊಂಡಿದ್ದರೂ ಇಂದು ಆ ಕಾರ್ಯ ಸಿದ್ಧಿಸಿಲ್ಲ. ಡಾ॥ ಅಂಬೇಡ್ಕರ್‌ರವರ ಫೋಟೋ ಅನಾವರಣ ಮಾಡುವುದರಿಂದಾಗಲೀ, ಅವರ ಹೆಸರನ್ನು ಬೀದಿಗಿಡುವುದರಿಂದಾಗಲೀ, ಒಬ್ಬ ದಲಿತ ಮುಖಂಡನಿಗೆ ಮಂತ್ರಿ ಪದವಿ ದೊರೆತದ್ದರಿಂದಾಗಲೀ ದೀನ ದಲಿತೋದ್ಧಾರ ಕಾರ್ಯವು ನೆರವೇರಿದಂತಾಗದು. ಭಗವಾನ್ ಬಸವಣ್ಣನವರು ಚೆನ್ನಯ್ಯನ ಮನೆಯ ದಾಸಿಯ ಮಗನಿಗೆ, ಕಕ್ಕಯ್ಯನ ಮನೆಯ ದಾಸಿಯ ಮಗಳ ಹೊಟ್ಟೆಯಲ್ಲಿ ನಾನು ಹುಟ್ಟಿದೆ. ಚನ್ನಯ್ಯ ನಮ್ಮಯ್ಯನು, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ. ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ-ಎನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ ಎಂದು. ತನ್ನ ವಿಡಂಬನೆ ಮಾಡಿಕೊಂಡು ಚನ್ನಯ್ಯ ಕಕ್ಕಯ್ಯ ಮೊದಲಾದವರನ್ನು ಎನ್ನ ಅಯ್ಯ, ಚಿಕ್ಕಯ್ಯ ಮುಂತಾಗಿ ಸಂಬೋಧಿಸಿ ಅವರನ್ನಪ್ಪಿಕೊಂಡಂತೆ ಇಂದಿನ ದೀನ ದಲಿತ ಬಂಧುಗಳನ್ನು ಅಪ್ಪಿಕೊಂಡಿದ್ದರೆ, ದಲಿತರ ಉದ್ಧಾರ ತಾನೇ ತಾನಾಗಿ ಕಾರ್ಯಗತಗೊಳ್ಳುತ್ತಿತ್ತು. ಈ ಕಾರ್ಯವನ್ನು ಎಂಟು ನೂರು ವರ್ಷಗಳ ಹಿಂದೆಯೇ ಆಚರಿಸಿ ತೋರಿಸಿ ಕೊಟ್ಟವರು ಬಸವಣ್ಣನವರು. ಅವರ ಜೀವನ ಸಂದೇಶಗಳು ಇಂದೂ ಅಗತ್ಯವಾಗಿವೆ. ಅವರು ದೀನ ದಲಿತರನ್ನಪ್ಪಿ ಕೊಂಡಂತೆ ಇಂದೂ ಅಪ್ಪಿ ಒಪ್ಪಿ ನಡೆದಾಗ ದೀನ ದಲಿತರ ಉದ್ಧಾರ ಸಾಧ್ಯವಾದೀತು. —

---

ಹಾಸನ ಜಿಲ್ಲಾ ಸಕಲೇಶಪುರ ತಾಲ್ಲೂಕು ಬಾಳ್ಳುಪೇಟೆಯ ಪ್ರಮುಖ ಕಾಫಿ ವಾಣಿಜ್ಯೋದ್ಯಮಿಗಳಾದ ಶ್ರೀ ಬಿ. ಜಿ. ಗುರಪ್ಪಗೌಡರು 12-5-80 ರಂದು ಸೋಮವಾರ ಬೆಳಿಗ್ಗೆ ಶಿವೈಕ್ಯರಾದರೆಂಬುದನ್ನು ತಿಳಿಸಲು ವಿಷಾದಿಸುತ್ತೇವೆ. ದಿವಂಗತರಿಗೆ " ಸಿದ್ಧಗಂಗಾ " ತನ್ನ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತದೆ.

ಸಕಾಲದಲ್ಲಿ ಮುದ್ರಣ ಕಾಗದ ದೊರೆಯದೆ ಪತ್ರಿಕೆಯು ತಡವಾಗಿ ಕೈಸೇರಿದ್ದಾಗ ವಿಷಾದಿಸುತ್ತೇವೆ. ಓದುಗ ಮಹಾಶಯರು ಸಹಕರಿಸಬೇಕಾಗಿ ವಿನಂತಿಸುತ್ತೇವೆ.

---

# ನವನೀತ

**ಗುಣವದ್ವಸ್ತು ಸಂಸರ್ಗಾದ್ಯಾತಿ ಸ್ವಲ್ಪೋಽಪಿ ಗೌರವಮ್ ।**
**ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ ॥**

ಗುಣವುಳ್ಳ ವಸ್ತುವಿನ ಸಂಸರ್ಗದಿಂದ ಅಲ್ಪನೂ ಸಹ ಗೌರವವನ್ನು ಪಡೆಯುತ್ತಾನೆ. ಹೂಮಾಲೆಯೊಡನೆ ಸೇರಿಕೊಂಡ ಕಾರಣದಿಂದ ದಾರವು ತಲೆಯಲ್ಲಿ ಧರಿಸಲ್ಪಡುವಂತೆ.

—ಚಂದ್ರಾಲೋಕ

  

**ಅಗುಣಸ್ಯ ಹತಂ ರೂಪಂ ಅಶೀಲಸ್ಯ ಹತಂ ಕುಲಂ ।**
**ಅಸಿದ್ಧೇಸ್ತು ಹತಾವಿದ್ಯಾ ಅಭೋಗಸ್ಯ ಹತಂ ಧನಂ ॥**

ಒಳ್ಳೆಯ ಗುಣವಿಲ್ಲದವನ ರೂಪ, ಶೀಲವಿಲ್ಲದವನ ಕುಲ, ಸಿದ್ಧಿಪಡೆಯದವನ ವಿದ್ಯೆ, ಅನುಭವಿಸದೇ ಇರುವವನ ಹಣ-ಈ ನಾಲ್ಕೂ ನಾಶವಾದಂತೆಯೇ.

—ಸುಭಾಷಿತ ರತ್ನಭಾಂಡಾಗಾರ

  

**ಅಹನ್ಯಹನಿ ಭೂತಾನಿ ಗಚ್ಛಂತೀಹ ಯಮಾಲಯಂ ।**
**ಶೇಷಾಃ ಸ್ಥಾವರ ಮಿಚ್ಛಂತಿ ಕಿಮಾಶ್ಚರ್ಯಮತಃ ಪರಮ್ ॥**

ಪ್ರತಿದಿನವೂ ಪ್ರಾಣಿಗಳು ಯಮನ ಮನೆಯನ್ನು ಕುರಿತು ಹೋಗುತ್ತಲೇ ಇದ್ದಾರೆ. ಆದರೂ ಉಳಿದವರು ಶಾಶ್ವತವಾಗಿ ಬದುಕಿರಲು ಬಯಸುತ್ತಾರೆ. ಇದಕ್ಕಿಂತ ಹೆಚ್ಚಿನ ಆಶ್ಚರ್ಯಯಾವುದಿದೆ?

—ಮಹಾಭಾರತ

  

# ಅಮೃತ ಬಿಂದು

ಜ್ಞಾನಿಗಳು ತಮ್ಮ ಅಸ್ತಿತ್ವವನ್ನು ಲೋಕೋದ್ಧಾರ ಕಾರ್ಯಗಳಿಗೆ ಮೀಸಲಾಗಿಡುತ್ತಾರೆ. ಅವರ ನಡೆ ಲೋಕಕ್ಕೆ ವರ್ತನೋಪದೇಶ. ನುಡಿ ಬದುಕಿನ ಬಿಡುಗಡೆಗೆ ಅಮೃತ ಸೇಚನ. ನಡೆ ನುಡಿಗಳ ಸಾಮರಸ್ಯ ಜೀವನ, ಜೀವಿತದ ಪರಮ ಧ್ಯೇಯ. ‘ ತನಗೆ ಮುನಿವರಿಗೆ ತಾಮುನಿಯದ ಶಾಂತ ಸ್ಥಿತಿ. ‘‘ ತನಗಿಂತ ಕಿರಿಯರಿಲ್ಲ ಶಿವಭಕ್ತರಿಂಗಿಂತ ಹಿರಿಯರಿಲ್ಲ’’ ವೆಂಬ ಕೈಂಕರ್ಯ ಭಾವ. ಇವನಮ್ಮವ ಇವನಮ್ಮವ ಇವನಮ್ಮವನೆನ್ನುವಪ್ರೇಮ ವಿಶ್ವಭ್ರಾತೃ ಪ್ರೇಮ. ‘ ದಯವೇ ಧರ್ಮದ ಮೂಲ, ದಯವಿರಬೇಕು ಸಕಲ ಪ್ರಾಣಿಗಳಲ್ಲಿ’ ಎಂಬ ‘ ಸಕಲ ಜೀವಾವಳಿಗಳಿಗೆ ಲೇಸ ’ ಬಯಸುವ ಅವರ ಕಾರುಣ್ಯದಲ್ಲಿ ವಿಶ್ವಶಾಂತಿಯ ಮೂಲ ತತ್ವ ಮಡುಗಟ್ಟಿನಿಂತಿದೆ. ‘ ದೇವನೊಬ್ಬ ನಾಮ ಹಲವು’ ಪರಮ ಪತಿವ್ರತೆಗೆ ಗಂಡನೊಬ್ಬ ಎಂಬ ಏಕ ದೈವೋಪಾಸನೆಯಲ್ಲಿ ಜಗತ್ತಿನ ಅಸ್ತಿತ್ವಕ್ಕೆ ಮೂಲಕಾರಣನಾದ ಪರಬ್ರಹ್ಮನ ಪಾರಮ್ಯವು ವ್ಯಕ್ತಗೊಂಡಿದೆ. ‘ಕಾಯಕವೇ ಕೈಲಾಸ’ವೆಂಬ ಬೀಜಮಂತ್ರ ವ್ಯಕ್ತಿ, ಜಾತಿ, ವರ್ಗ, ಲಿಂಗಗಳ ಅಂತಸ್ತನ್ನು ಮೀರಿ ಇಡೀ ಮಾನವ ಕುಲದ ಉದ್ಧಾರದಲ್ಲಿ ಮುನ್ನಡೆಸುವ ಶ್ರೇಷ್ಠ ತಾರಕ ಯಂತ್ರವಾಗಿದೆ. ಹೀಗೆ ಮನುಕುಲದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಸಾಧಕವಾದ ಹಲವು ಮುಖ್ಯ ತತ್ವಗಳು ಬಸವಣ್ಣನವರ ‘‘ ಪ್ರಕೃತಿಸಿದ್ಧಮಿದಂ ಹಿ ಮಹಾತ್ಮನಾಂ ” ಎನ್ನುವಂತೆ ಪ್ರಕೃತಿ ಸಿದ್ಧಾ ನೈಜ ಸ್ವಭಾವ ಗುಣಗಳಾಗಿದ್ದುವು. ಇಂತಹ ದಿವ್ಯವಾದ ಆದರ್ಶ ಗುಣಗಳಿಂದ ತಮ್ಮನ್ನು ಜನ ಸೇವೆಗೆ ಅರ್ಪಿಸಿಕೊಂಡರು.

—ದುಂಬಿ

# "ಸಿದ್ಧಗಂಗಾ ಶ್ರೀ' ಸಂಭಾವನ ಗ್ರಂಥದ ಕಿರುಪರಿಚಯ

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು 50 ವರ್ಷಗಳಿಂದಲೂ ಅವ್ಯಾಹತವಾಗಿ ಎಸಗಿರುವ ಮತ್ತು ಎಸಗುತ್ತಿರುವ ಬಹುಮುಖವಾದ ಸಮಾಜ ಸೇವೆಯನ್ನು ಮನಗಂಡ ಎಲ್ಲ ವರ್ಗದ ಭಕ್ತಕೋಟಿ, ತನ್ನ ಕೃತಜ್ಞತೆಯನ್ನು ಸಮರ್ಪಿಸುವುದರ ಸಂಕೇತವಾಗಿ 1980 ನೆಯ ಇಸ್ವಿಯಲ್ಲಿ " ಸುವರ್ಣ ಮಹೋತ್ಸವ " ವನ್ನು ಪೂಜ್ಯಪಾದರ ಘನತೆ, ಗೌರವಗಳಿಗೆ ತಕ್ಕಂತೆ ಆಚರಿಸಬೇಕೆಂಬ ಸಂಕಲ್ಪ ತಾಳಿರುವುದು ಈಗಾಗಲೆ ವಿದಿತವಾಗಿದೆ. ಆ ಒಂದು ಶುಭ ಸಂದರ್ಭದಲ್ಲಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಬಳಗವು, ಸಿದ್ಧಗಂಗಾ ಶ್ರೀ ಎಂಬ ಸಂಭಾವನಾ ಸಂಪುಟವನ್ನು ಅರ್ಪಿಸಬೇಕೆಂದು ಉದ್ದೇಶಿಸಿ ಸಿದ್ಧತೆಗಳು ಭರದಿಂದ ಸಾಗುತ್ತಿವೆ. ಆ ಯೋಜನೆಯನ್ವಯ ಡಾ॥ ಶ್ರೀ ಸಿದ್ಧಯ್ಯ ಪುರಾಣಿಕರವರ ಅಧ್ಯಕ್ಷತೆಯಲ್ಲಿ, ಶ್ರೀ ಪಂಡಿತ ಚನ್ನಪ್ಪ ಎರೇಸೀಮೆ ಮತ್ತು ಶ್ರೀ ಟಿ. ಆರ್. ಮಹಾದೇವಯ್ಯನವರ ಪ್ರಧಾನ ಸಂಪಾದಕತ್ವದಲ್ಲಿ ಗ್ರಂಥದ ಮುದ್ರಣ ಕಾರ್ಯ ನಡೆಯುತ್ತಿದೆ.

**ಸಿದ್ಧಗಂಗಾ ಶ್ರೀ ಯ ಆಕಾರ-ಸ್ವರೂಪಾದಿಪರಿಚಯ**

ಈ ಸಂಭಾವನಾ ಗ್ರಂಥವು ¼ ಡೆಮ್ಮಿ ಆಕಾರವನ್ನು ಹೊಂದಿದ್ದು, ಸುಮಾರು 1200 ಪುಟಗಳುಳ್ಳ ಬೃಹದ್ ಗ್ರಂಥವಾಗಿದೆ. ಅದರಲ್ಲಿ "ಕ್ಷೇತ್ರಶ್ರೀ' ದರ್ಶನಶ್ರೀ' "ಸಾಹಿತ್ಯಶ್ರೀ' ಮತ್ತು "ಕಲಾಶ್ರೀ' ಎಂಬ ನಾಲ್ಕು ಭಾಗಗಳಿರುತ್ತವೆ. ಅದರಲ್ಲಿ ಮೊದಲನೆಯದಾದ ಕ್ಷೇತ್ರಶ್ರೀ ಭಾಗದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಇತಿಹಾಸ, ಪರಿಸರ ಅದರ ಮಹತ್ವ, ಕ್ಷೇತ್ರದ ಗುರುಪರಂಪರೆ ಇತ್ಯಾದಿಗಳ ದೀರ್ಘ ವಿಚಾರವಿದ್ದು, ಶ್ರೀ ಅಟವೀಸ್ವಾಮಿಗಳ, ಶ್ರೀಮದುದ್ದಾನ ಶಿವಯೋಗಿಗಳ, ಹಾಗೂ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಜೀವನ ಚರಿತ್ರೆಯನ್ನೊಳಗೊಂಡ ವಿಚಾರ ಪರಿಪ್ಲುತವಾದ ಲೇಖನಗಳಿವೆ. ಮತ್ತು ಕಡೆಯಲ್ಲಿ ನಾಡಿನ ಸುಪ್ರಸಿದ್ಧ ಕವಿಗಳೂ ಶ್ರೀ ಕ್ಷೇತ್ರವನ್ನು ಹಾಗೂ ಶ್ರೀ ಶ್ರೀ ಗಳವರನ್ನು ಕುರಿತು ಬರೆದ ಕವನಗಳಿರುತ್ತವೆ. ಎರಡನೆಯದಾದ 'ದರ್ಶನಶ್ರೀ' ವಿಭಾಗದಲ್ಲಿ ಭಾರತೀಯ ಮತ್ತು ಇತರ ಎಲ್ಲ ದರ್ಶನಗಳ ಸಾಮಾನ್ಯ ಪರಿಚಯ ಹಾಗೂ ವೀರಶೈವ ದರ್ಶನದ ವಿಶೇಷ ವಿಚಾರವು ಅಡಕಗೊಂಡಿರುತ್ತದೆ. ಮುಂದಿನ "ಸಾಹಿತ್ಯದ ಸಮಗ್ರ ನೋಟ ಇದೆ. ಕೊನೆಯದಾದ "ಕಲಾಶ್ರೀ" ಯಲ್ಲಿ ಸಂಗೀತ, ನಾಟಕ, ನೃತ್ಯ, ಮುಂತಾದ ಕಲೆಗಳಿಗೆ ಶಿವಶರಣರ ಕೊಡುಗೆಯನ್ನು ಕುರಿತ ವಿವೇಚನಾತ್ಮಕ ಪ್ರಬಂಧಗಳಿವೆ.

ಶ್ರೀ ಕ್ಷೇತ್ರಕ್ಕೆ ಸಂಬಂಧ ಪಟ್ಟ ಮತ್ತು ಶ್ರೀ ಶ್ರೀ ಗಳವರಿಗೆ ಸಂಬಂಧಿಸಿದ ನೂರಾರು ಸುಂದರ ಭಾವ ಚಿತ್ರಗಳನ್ನು ಒಳಗೊಂಡಿರುವುದು ಈ ಗ್ರಂಥದ ಮತ್ತೊಂದು ವೈಶಿಷ್ಟ್ಯವಾಗಿದೆ.

ಇಂಥ ಈ ಗ್ರಂಥವನ್ನು ಹೊರತರಲು ಸುಮಾರು ಎರಡೂವರೆಲಕ್ಷ ರೂಪಾಯಿಗಳ ವೆಚ್ಚವನ್ನು ಅಂದಾಜು ಮಾಡಲಾಗಿದೆ. ಆದ್ದರಿಂದ ಕಾಗದ ಮುದ್ರಣಾದಿ ಖರ್ಚು ವೆಚ್ಚಗಳು ಗಗನಕ್ಕೇರಿರುವುದರಿಂದ ಈ ಕಾಲದಲ್ಲಿ ಗ್ರಂಥಕ್ಕೆ 150 ರೂಪಾಯಿಗಳ ಬೆಲೆಯನ್ನು 'ಪ್ರತಿ' ಯೊಂದಕ್ಕೆ ಅನಿವಾರ್ಯವಾಗಿ ಗೊತ್ತುಪಡಿಸಲಾಗಿರುತ್ತೆ. ಆದರೆ ಪ್ರತಿಗಳನ್ನು ಮುಂಗಡವಾಗಿ ಕಾದಿರಿಸುವ ಸಾರ್ವಜನಿಕರಿಗೆ 100 ರೂಪಾಯಿಗಳನ್ನೂ ಪಡೆದು ಕೊಂಡು ಪ್ರತಿಗಳನ್ನು ಕಾದಿರಿಸುವಂತೆ ಸಂಘವು ನಿರ್ಣಯಿಸಿರುತ್ತದೆ. ಪ್ರಯುಕ್ತ ಮುಂಗಡವಾಗಿ ಪ್ರತಿಗಳನ್ನು ಕಾದಿರಿಸ ಬಯಸುವವರು 1980 ನೆಯ ಜೂನ್ ಮಾಹೆಯ ಅಂತ್ಯದೊಳಗಾಗಿ- ಕಾರ್ಯದರ್ಶಿಗಳು, ಹಳೆಯ ವಿದ್ಯಾರ್ಥಿಗಳ ಸಂಘ, ಶ್ರೀ ಸಿದ್ಧಗಂಗಾ; ತುಮಕೂರು ಜಿಲ್ಲಾ 572104—ಈ ವಿಳಾಸಕ್ಕೆ ಎಂ. ಒ. ಅಥವಾ ಚೆಕ್ ಅಥವಾ ಡಿ. ಡಿ. ಮುಖಾಂತರ ಹಣವನ್ನು ಕಳುಹಿಸಿ ತಮ್ಮ ಪ್ರತಿಗಳನ್ನು ಕಾದಿರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಮುಂದುವರಿದ ಲೇಖನ

# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಇತಿಹಾಸ

## ( ಸಿದ್ಧಗಂಗಾ ಪರಿಸರದಲ್ಲಿ ಸಿದ್ಧತ್ರಯರ ಸಂಚಾರ : )

—ಚನ್ನಪ್ಪ ಎರೇಸೀಮೆ

೧೨ನೆಯ ಶತಮಾನದ ಈ ಪರಿಸರದ ಮಹತ್ವದ ಬಗೆಗೆ ಮುಖ್ಯವಾಗಿ ಯೋಚಿಸುವ ಇನ್ನೊಂದು ಅಂಶ ವೆಂದರೆ ಬಸವಾದಿ ಪ್ರಮಥರ ದಿವ್ಯತತ್ವವನ್ನು ಪ್ರಸಾರ ಮಾಡಲು ಬಹುವಾಗಿ ಹೆಣಗಿದ ರೇವಣ್ಣಸಿದ್ಧ, ಮರುಳ ಸಿದ್ಧ ಮತ್ತು ಸಿದ್ಧರಾಮರ ಅತ್ಯಂತ ಕುತೂಹಲಕಾರಿ ಯಾದ ಕ್ರಾಂತಿಯ ವಿಚಾರ. ಚರಿತ್ರೆಯ ಗರ್ಭದಲ್ಲಿ ಈ ಮಹಾಪುರುಷರ ವಿಮುಲಕರ್ತೃತ್ವಶಕ್ತಿ, ಸ್ಥಳ ಸನ್ನಿ ವೇಶದ ಕುರುಹುಗಳು, ಸಂಚಾರ ಮಾಡಿದ ಸ್ಥಳಗಳು ಮಾಡಿದ ಕಾರ್ಯಗಳು ಹುದಗಿದ್ದರೂ ಸವೆದು ಗುರುತು ಸಿಗದಂತಾಗಿದ್ದರೂ ಎಳೆಯೆಳೆಯಾಗಿ ಅವುಗಳನ್ನು ಬಿಡಿಸಿ ಕಳೆಮಳಿದ ಅನೇಕ ಅವಶೇಷಗಳು, ಹೇಳಿಕೆಗಳು, ಸ್ಥಳ ಪುರಾಣಗಳೇ ಮೊದಲಾದವುಗಳಿಂದ ನಿಚ್ಚಳವಾಗಿಯಲ್ಲವಿ ದ್ದರೂ ಮುಸುಮುಸುಕಾಗಿಯಾದರೂ ಕಂಡು ಹಿಡಿಯಬ ಹುದಾಗಿದೆ. ಕಲ್ಯಾಣದ ಶೂನ್ಯ ಪೀಠಾಧಿಪತಿಗಳಾದ ಚನ್ನಬಸವೇಶ್ವರರು ಉಳುವೆಗೆ ಹೋದ ಮೇಲೆ ಶೂನ್ಯ ಸಿಂಹಾಸನಾಧಿಪತಿಸ್ಥಾನದಲ್ಲಿ ರುದ್ರಮುನಿ ಶಿವಾಚಾರ್ಯರು ಸಿದ್ಧರಾಮೇಶ್ವರರಿಬ್ಬರ ಹೆಸರುಗಳೂ ಕೇಳಿಬರುತ್ತವೆ. ರುದ್ರಮುನಿ ಶಿವಾಚಾರ್ಯರು ಕಲ್ಯಾಣದ ಶರಣರ ಕೊನೆ ಯ ದಿನಗಳಲ್ಲಿ ನಡೆದ ಘೋರಕದನದಲ್ಲಿ ಪ್ರತ್ಯಕ್ಷ ಭಾಗಿ ಗಳಾಗಿದ್ದವರು. ಉಳುವೆಯ ಕಡೆಗೆ ಮತ್ತು ಶಿವಗಂಗೆ ಯ ಕಡೆಗೆ ಹೋಗುತ್ತಿದ್ದ ತಂಡದಲ್ಲಿ ಇವರೂ ಮಡಿವಾಳ ಮಾಚಯ್ಯನವರೂ ಹೋರಾಟದ ನೇತೃತ್ವ ವಹಿ ಸಿದ್ದರೆಂದು ಹೇಳಲಾಗುತ್ತಿದೆ. ಕಾತರಹಳ್ಳಿ (ಬೆಳಗಾಂ ಜಿಲ್ಲಾ) ಯಲ್ಲಿ ಶಿವಶರಣರು ಮತ್ತು ಬಿಜ್ಜಳನ ಸೈನ್ಯದ ನಡುವಿನ ಹೋರಾಟದಲ್ಲಿ ಇವರು ಇದ್ದರು. ಹೋರಾ ಡುತ್ತಾ ಶರಣರ ತಂಡ ಉಳುವೆಯ ಮಹಾಮನೆಯಲ್ಲಿ ಲಿಂಗೈಕ್ಯರಾದ ಮೇಲೆ ಇವರನ್ನು ರೇವಣ್ಣಸಿದ್ಧೇಶ್ವರರು ಕರೆದುಕೊಂಡು ದಕ್ಷಿಣಕ್ಕೆ ಹೊರಟು ಬಂದಿರಬೇಕು. ಎಂದು ಊಹಿಸಲು ಶಕ್ಯವಿದೆ. ಮಡಿವಾಳ ಮಾಚಯ್ಯ ನವರು ಹಿಪ್ಪರಿಗೆಯ ಕಡೆಗೆ ಹೊರಟು ಬಂದು ಅಲ್ಲಿ ಲಿಂಗೈಕ್ಯರಾದರು. ರುದ್ರಮುನಿಶಿವಾಚಾರ್ಯರನ್ನು ಶೂನ್ಯ ಸಿಂಹಾಸನಾಧಿಪತಿಗಳನ್ನಾಗಿ ಮಾಡಲು ಒಪ್ಪದೆ ರೇವಣ್ಣಸಿದ್ಧೇಶ್ವರರು ಕಕುದ್ಗಿರಿಗೆ ಕರೆದುಕೊಂಡು ಬಂದ ರೆಂದೂ ಸಿದ್ಧರಾಮೇಶ್ವರರೂ ಆಮೇಲೆ ಬಂದು ಇವರೊ ಡನೆ ಕೂಡಿಕೊಂಡು ಕಕುದ್ಗಿರಿಯ ಮೇಲಣ ಗವಿಯಲ್ಲಿ ಇವರೆಲ್ಲ ವಾಸಿಸತೊಡಗಿದರೆಂದೂ ಶ್ರೀ ಚೆನ್ನಮಲ್ಲಿಕಾ ರ್ಜುನರು ಪುರಾಣವೊಂದರ ಆಧಾರದಿಂದ ವಿವರಿಸಿದ್ದಾರೆ[13] ಚೆನ್ನಬಸವಣ್ಣನವರ ನಂತರ ಸಿದ್ಧರಾಮೇಶ್ವರರು ಶೂನ್ಯ ಸಿಂಹಾನಾಧಿಪತ್ಯವನ್ನು ವಹಿಸಿದುದಂತೂ ಎಲ್ಲರು ಒಪ್ಪುವ ಅಂಶ. ಇದೆಲ್ಲ ಕ್ರಿ. ಶ 1176 ರ ನಂತರ ನಡೆದ ವಿಚಾರಗಳೆಂದು ತೋರುವುದು. ಇವರ ಜೊತೆಗೆ ಮರು ಳಸಿದ್ಧೇಶ್ವರರೂ ಇದ್ದರು. ಇವರೆಲ್ಲರ ಸ್ಮಾರಕಗಳು

13. ಶ್ರೀ ಚೆನ್ನಮಲ್ಲಿಕಾರ್ಜುನ ರೇವಣ್ಣಸಿದ್ಧರು. ಪು. 218

ಶಿವಗಂಗಾ ಬೆಟ್ಟದಲ್ಲಿವೆ.[14] ಮೂವರು ಸಿದ್ಧಪುರುಷರು ಸಿದ್ಧಗಂಗೆ, ಶಿವಗಂಗೆ ಮತ್ತು ಸುತ್ತ ಮುತ್ತಣ ಪ್ರದೇಶದಲ್ಲಿ ಮಾಡಿದ ಧರ್ಮ, ಸಂಸ್ಕೃತಿ, ಸಾಹಿತ್ಯ ಪ್ರಚಾರ ಕಾರ್ಯ ಅತ್ಯಂತ ಗಮನಾರ್ಹವಾದುದಾಗಿದೆ. ಇವರ ಕ್ರಾಂತಿಯ ಫಲವಾಗಿ ಈ ಭಾಗದಲ್ಲಿ ಅನೇಕ ಮಠಮಾನ್ಯಗಳು ಗದ್ದುಗೆಗಳೂ, ಸ್ಮಾರಕಗಳೂ, ವಿಗ್ರಹಗಳೂ, ವೀರಭದ್ರಮೂರ್ತಿಗಳೂ ಉಂಟಾಗಲು ಕಾರಣವಾಯಿತು.[15].

ಈ ಸಿದ್ಧತ್ರಯರು ಶಿವಗಂಗೆಯಿಂದ ಹೊರಟು ಅನೇಕ ದಿನಗಳ ಕಾಲ ರಾಮಗಿರಿ, ಶಿವಗಿರಿ ಸಿದ್ಧಗಿರಿ ನೆಲಮನೆ ಬೆಟ್ಟಗಳಲ್ಲಿ ವಾಸಿಸಿ ಸುತ್ತ ಮುತ್ತಣ ಪ್ರದೇಶಗಳಲ್ಲಿ ಸಂಚರಿಸಿದ ಹಾಗೆ ಶ್ರೀ ಚೆನ್ನಮಲ್ಲಿಕಾರ್ಜುನರು ವಿವರಣೆ ನೀಡಿದ್ದಾರೆ.[16] ಇಲ್ಲಿನ ರಾಮಗಿರಿ ಎಂಬುದಂತೂ ಸ್ಪಷ್ಟವಾಗಿ ಈಗಿನ ಸಿದ್ಧಗಂಗಾ ಬೆಟ್ಟದ ಅವಳಿ ಬೆಟ್ಟವಾದ ರಾಮಲಿಂಗೇಶ್ವರ ಬೆಟ್ಟ, ( ರಾಮದೇವರ ಬೆಟ್ಟ ) ಬೆಟ್ಟದ ಮೇಲಿರುವ ಕಡೆದ ಕಲ್ಲಿನ ರಾಮಲಿಂಗೇಶ್ವರ ದೇವಾಲಯ ಮತ್ತು ಅಲ್ಲಿಯೇ ಪಕ್ಕದಲ್ಲಿನ ಶಿವಲಿಂಗವಿರುವ ಎರಡು ಗುಹೆಗಳು, ಹರಕು ಮುರುಕಾಗಿರುವ ಚಿಕ್ಕ ಚಿಕ್ಕ ಕೊತ್ತಳಗಳನ್ನುಳ್ಳ ಕೋಟೆ ಬೆಟ್ಟದ ಪೂರ್ವ ದಿಗ್ಭಾಗದ, ಮಧ್ಯಂತರ ಪ್ರದೇಶದಲ್ಲಿರುವ ಚಿಕ್ಕಸಿದ್ಧಪ್ಪ ಮತ್ತು ದೊಡ್ಡಸಿದ್ಧಪ್ಪನವರ ಹೆಸರಿನಿಂದ ಕರೆಯಲಾಗುತ್ತಿರುವ ಶಿವಲಿಂಗ ವಿಶಿಷ್ಟವಾದ ಎರಡು ಭವ್ಯ ಗವಿಗಳು ಈ ಬೆಟ್ಟ ಗತಕಾಲದಲ್ಲಿ ಧರ್ಮ ಸಂಸ್ಕೃತಿ ಸಂವರ್ಧನೆಯ ಕೇಂದ್ರವಾಗಿತ್ತೆಂಬ ಅಂಶವನ್ನು ಸಾರುತ್ತಿರುವ ಪಳೆಯುಳಿಕೆಗಳು. ಸಿದ್ಧಗಂಗಾ ಕ್ಷೇತ್ರಾಧಿಪತಿಗಳಿಗೆ ದೊಡ್ಡಸಿದ್ಧಪ್ಪನ ಗವಿಯ ಸಂಬಂಧ ಇನ್ನೂ ಇದೆ. ಉದ್ದಾನ ಶಿವಯೋಗಿಗಳು ಶಿವಯೋಗ ಸಿದ್ಧಿಯನ್ನು ಪಡೆದ ಗುಹೆಗಳಲ್ಲಿ ಈ ಗುಹೆಗೆ ಬಹು ಪ್ರಮುಖ ಸ್ಥಾನವಿದೆ. ಈ ವಿಷಯವನ್ನು ಸ್ಥೂಲವಾಗಿ ಹಿಂದಿನ ಪುಟಗಳಲ್ಲಿ ವಿವರಿಸಲಾಗಿದೆ. 'ಶಿವಗಿರಿ ಎಂದು ಯಾವುದಕ್ಕೆ ಕರೆದರೋ ಗೊತ್ತಾಗುತ್ತಿಲ್ಲವಾದರೂ ರಾಮಗಿರಿಯ ಪಕ್ಕದ ಸಿದ್ಧಗಂಗಾ ಬೆಟ್ಟಕ್ಕೆ ಕರೆದಿರಬೇಕೆಂದು ಊಹಿಸಲುಶಕ್ಯವಿದೆ. ಗೋಸಲಸಿದ್ಧೇಶ್ವರರು ಇಲ್ಲಿಗೆ ಬಂದು ತಮ್ಮ ಸಮಯಾಚಾರದ ಮಠವನ್ನು ಸ್ಥಾಪಿಸುವವರೆಗೆ ಈ ಹೆಸರಿನಿಂದ ಈ ಬೆಟ್ಟವನ್ನು ಕರೆದಿರಬಹುದು. ಏಕೆಂದರೆ ರಾಮದೇವರ ಬೆಟ್ಟ, ಶಿವಗಂಗೆ ಬೆಟ್ಟಗಳಂತೆ ಇಲ್ಲಿಯೂ ತಪೋಯೋಗ್ಯವಾದ ಅನೇಕ ಗುಹೆಗಳು ಗುಹೆಗಳಲ್ಲಿ ಶಿವಲಿಂಗಗಳೂ ಇರುವುದು ಮತ್ತು ಗಂಗಾಜಲ ವಿಶಿಷ್ಟವಾದ ಈಗಿನ ಗಂಗಮ್ಮನವರ ಭವ್ಯವೂ ವಿಶಾಲವೂ ಆದ ಗವಿಯು ನಮ್ಮ ಊಹೆಯನ್ನು ದೃಢಪಡಿಸಲು ಇರುವ ಪ್ರಮುಖ ಕಾರ್ಯಗಳಲ್ಲಿ ಒಂದು. ಉತ್ತರ ದಿಗ್ಭಾಗದಲ್ಲಿ ದೇವರಾಯ ಪಟ್ಟಣದ ಕಡೆಗಿರುವ ಭವ್ಯವೂ ವಿಶಾಲವೂ ಶಿವಲಿಂಗ ವಿಶಿಷ್ಟವೂ ಆದ ಗವಿಯೂ ಒಂದು ಪ್ರಬಲಾಧಾರ. ಅಲ್ಲದೆ 'ಶಿವಗಿರಿ' ಎಂದು ಈಗ ಯಾವ ಬೆಟ್ಟವನ್ನೂ ಕರೆಯಲಾಗುತ್ತಿಲ್ಲ. ಸಿದ್ಧಗಿರಿ ಅಥವಾ 'ಜಲಸಿದ್ಧಗಿರಿ' ಎಂಬುದಂತೂ ಶಿವಗಂಗೆಗೂ ರಾಮಗಿರಿಗೂ ಮಧ್ಯದಲ್ಲಿ ಕೇವಲ ಎರಡು ಸಿಟ್ಟಿನಿಂದ 3-4 ಮೈಲಿಗಳು ಅಂತರದಲ್ಲಿ ಅನೇಕ ಅವಶೇಷಗಳಿಂದ ತುಂಬಿರುವ ಈಗಿನ ನಿಜಗಲ್ಲು ಬೆಟ್ಟವೆಂಬುವುದರಲ್ಲಿ ಸಂಶಯ ಬಾರದು. ಈ ಬೆಟ್ಟಕ್ಕೆ ಈಗಲೂ ಸಿದ್ಧನಬೆಟ್ಟ ಅಥವಾ ಸಿದ್ಧರಬೆಟ್ಟವೆಂದೇ ಕರೆಯಲಾಗುತ್ತಿದೆ. ಬೆಟ್ಟದ ಪಾರ್ಶ್ವದಲ್ಲಿರುವ ಉದ್ದಾನ ವೀರಭದ್ರ, ಕಡೆದ ಕಲ್ಲಿನ ಬಾಗಿಲುಗಳಿಂದ ಭವ್ಯವಾಗಿರುವ ಗುಹೆಗಳು ಗುಹೆಗಳಲ್ಲಿನ ಶಿವಲಿಂಗಗಳು ಪ್ರಾಚೀನ ಕೋಟೆಕೊತ್ತಲಗಳು ಈ ಬೆಟ್ಟದ ಪ್ರಾಚೀನತೆಯನ್ನೂಭವ್ಯ ಸಾಂಸ್ಕೃತಿಕ ಮತ್ತು ಧಾರ್ಮಿಕ ಕೇಂದ್ರವೆಂಬುದನ್ನೂ ನಿಚ್ಚಳಗೊಳಿಸಲು ಇರುವ ಜೀವಂತನಿದರ್ಶನಗಳು. ನೆಲಮನೆಬೆಟ್ಟವೆಂದರೆ ಶಿವಗಂಗೆಯಿಂದ ಆಗ್ನೇಯ ದಿಗ್ಭಾಗದಲ್ಲಿ ಸುಮಾರು .30-40 ಮೈಲುಗಳ ಅಂತರದಲ್ಲಿರುವ ರೇವಣ್ಣಸಿದ್ಧೇಶ್ವರ ಬೆಟ್ಟ; ಇದಕ್ಕೆ ಅವ್ವೇರ ಹಳ್ಳಿ ಬೆಟ್ಟವೆಂದೂ ಕಲೆಯಲಾಗುತ್ತಿದೆ, ಇದು ಇಂದಿಗೂ ರೇವಣ್ಣಸಿದ್ಧೇಶ್ವರನ ಹೆಸರಿನ ದೇವಾಲಯವನ್ನು ಹೊಂದಿ ವೀರಶೈವ ಪ್ರಪಂಚಕ್ಕೆಲ್ಲಾ ಪೂಜ್ಯಸ್ಥಾನವಾಗಿಯೇ ಇದೆ.

---

14. ಅದೇ ಪು. 220-21 15. ಈ ಬಗೆಗೆ ಹಿಂದಿನ ಪುಟದಲ್ಲೇ ಸಂಕ್ಷೇಪವಾಗಿ ತಿಳಿಸಿರುವುದನ್ನು ನೋಡಬಹುದು.
16. ರೇವಣಸಿದ್ಧೇಶ್ವರರು 218, 219, 231, 234 ಇತ್ಯಾದಿ.

ಮೇಲೆ ವಿವರಿಸಿರುವ ಶಿವಗಂಗೆ, ಸಿದ್ಧಗಿರಿ, ರಾಮಗಿರಿ, ಶಿವಗಿರಿ, ನೆಲಮನೆ ಗಿರಿಗಳನ್ನು ಕ್ರಿ. ಶ 1176 ರಿಂದ ಇತ್ತೀಚೆಗೆ ರೇವಣ್ಣಸಿದ್ಧ, ಮರುಳಸಿದ್ಧ, ಸಿದ್ಧರಾಮ– ಈ ಸಿದ್ಧತ್ರಯರು ತಮ್ಮ ಪ್ರಚಾರ ಕೇಂದ್ರಗಳನ್ನಾಗಿಸಿಕೊಂಡು ತಮ್ಮ ಧಾರ್ಮಿಕ, ಸಾಮಾಜಿಕ, ನೈತಿಕ ವಿಚಾರಗಳ ಪ್ರಚಾರದಿಂದ ಸುತ್ತಮುತ್ತಣ ಪ್ರದೇಶದ ಜನತೆಯನ್ನು ಸುಸ್ಥಿತಿಗೆ ತರಲು ಬಹುವಾಗಿ ಹೆಣಗಿದದು ಸುಸ್ಪಷ್ಟವಾದ ಅಂಶವೇ ಆಗಿದೆ. ಈ ವಿಚಾರದ ಹಿನ್ನೆಲೆಯಲ್ಲಿ ಈ ಮೂವರು ಸಿದ್ಧಪುರುಷರಿಗೆ ಸಿದ್ಧಗಂಗಾ ಗಿರಿಯೂ ವಾಸ್ತವ್ಯ ಸ್ಥಾನವಾಗಿರಬೇಕು. ಅವರು ಅನೇಕ ದಿನಗಳು ಇಲ್ಲಿ ವಾಸಮಾಡಿದ್ದಾರೆನ್ನಲು ಸಿದ್ಧಗಂಗಾ ಗಿರಿಯ ಪಕ್ಕದ ಬೆಳಗುಂಬದ ಗುಡ್ಡದಲ್ಲಿರುವ ಸಿದ್ಧರಾಮೇಶ್ವರರ ದೇವಾಲಯವೂ ಒಂದು ಒಳ್ಳೆಯ ನಿದರ್ಶನವೆನ್ನಲು ಅನುಮಾನಬಾರದು. ಶಿವಗಂಗೆಯ ಪಕ್ಕದ ಕಂಬಾಳು, ಮರುಳಸಿದ್ಧೇಶ್ವರರ ಸ್ಥಾನವಾಗಿದ್ದು, ಅಲ್ಲಿ ಒಂದೂವರೆ ಅಡಿ ಎತ್ತರದ ಮರುಳಸಿದ್ಧೇಶ್ವರರ ವಿಗ್ರಹ ಎಡಗೈಯಲ್ಲಿ ಲಿಂಗ, ಬಲಗೈಯಲ್ಲಿ ಜಪಮಾಲೆಯನ್ನು ಹಿಡಿದು ಕುಳಿತಂತೆ ಇದೆ. ಕಂಬಾಳು ಮಠ ಪರ್ವತ ಶಾಖೆಗೆ ಸೇರಿದದ್ದು, ಅಲ್ಲಿ ಮಲ್ಲಿಕಾರ್ಜುನ ಮೂರ್ತಿಯು ಇದೆ ಎಂದು ಚನ್ನಮಲ್ಲಿಕಾರ್ಜುನರು ತಮ್ಮ ರೇವಣ್ಣಸಿದ್ಧೇಶ್ವರರು ಗ್ರಂಥದಲ್ಲಿ ವಿವರಣೆ ನೀಡಿದ್ದಾರೆ. ಕ್ರಿ. ಶ. 1178 ರಲ್ಲಿ ಈ ಪ್ರಾಂತದ ರಾಜನಾಗಿದ್ದ ವೀರಬಲ್ಲಾಳನ ಆಳ್ವಿಕೆಯಲ್ಲಿ ರೇವಣ್ಣಸಿದ್ಧರು ಕೂಸು ಬಸವನ ಮೂಲಕ ಶಿವಗಂಗೆ ಬೆಟ್ಟದ ಮೇಲೆ ಅಗ್ನಿಸ್ತಂಭ ಜಲಸ್ತಂಭಗಳನ್ನು ನಿಲ್ಲಿಸಲಿಕ್ಕೂ ವೀರಭದ್ರಮೂರ್ತಿಗಳ ಪ್ರತಿಷ್ಠೆ ಮಾಡಿಸಲಿಕ್ಕೂ ಕಾರಣವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ರೇವಣ್ಣಸಿದ್ಧರು ವೀರಗೋತ್ರದವರಾದುದರಿಂದ ತಮ್ಮ ಗೋತ್ರದ ಅಧಿಪತಿಯಾದ ವೀರಭದ್ರಮೂರ್ತಿಯನ್ನು ಬಹಳ ಕಡೆ ಈ ಭಾಗದಲ್ಲಿ ಸ್ಥಾಪಿಸಲು ಕಾರಣವಾಯಿತು. ಮೇಲಣ ಗವಿಮಠದಲ್ಲೂ ವೀರಭದ್ರಮೂರ್ತಿಯಿರುವುದನ್ನು ಗಮನಿಸಬಹುದು. ಇವೆಲ್ಲ ರೇವಣ್ಣಸಿದ್ಧೇಶ್ವರರ ಕಾಲದಲ್ಲೋ ಅಥವಾ ಅವರ ನಂತರ ಅವರ ಪ್ರಭಾವದಿಂದ ಜನರು ಪ್ರತಿಷ್ಠಿಸಿದವೋ ಹೇಳಲಾಗುವುದಿಲ್ಲ. ಇಲ್ಲಿನ ರುದ್ರೇಶ್ವರ ದೇವಾಲಯದಲ್ಲಿರುವ ಆರು ಅಡಿ ಎತ್ತರದ ವೀರಭದ್ರಮೂರ್ತಿ ಭವ್ಯವಾಗಿದೆ. ಈ ಗುಡಿಯ ಉತ್ತರ ದಿಗ್ಭಾಗದಲ್ಲಿ ಕೊಳವೂ ಆ ಕೊಳದ ಪಶ್ಚಿಮಕ್ಕೆ ಮಹಂತಿನ ಮಠವೆಂದು ಕರೆಯಿಸಿಕೊಳ್ಳಲ್ಪಡುವ ಇನ್ನೊಂದು ವೀರಶೈವ ಮಠವೂ ಇವೆ. ಹೀಗೆ ಶಿವಗಂಗೆ ಮತ್ತು ಅದರ ಸುತ್ತ ಮುತ್ತಣ ಪ್ರದೇಶಗಳಲ್ಲಿ ಅನೇಕ ಮಠಗಳು ಗತಕಾಲದ ವೀರಶೈವ ಧರ್ಮದ ಉಚ್ಛ್ರಾಯ ಸ್ಥಿತಿಯನ್ನು ಸಾರುವ ಜೀವಂತ ನಿದರ್ಶನಗಳಾಗಿ ಉಳಿದಿವೆ. ಕಣ್ಣಿಟ್ಟಲ್ಲಿ ಶಿವಲಿಂಗಗಳು, ನಂದಿಯ ವಿಗ್ರಹಗಳು, ಎಡಗೈಯಲ್ಲಿ ಲಿಂಗ ಹಿಡಿದಿರುವ ವಿಗ್ರಹಗಳು. ಕುವೆಂಪು ಅವರ ಮಾತಿನಲ್ಲಿ 'ಹಾಳು ದೇಗುಲದಲ್ಲಿ' ಲಂಟಾನಪೊದೆಯಲ್ಲಿ ಕಲ್ಲುರುಳಿ ಮುರಿದ ಅರಳಿಕಟ್ಟೆ, ಹಳುಬೆಳೆದಲ್ಲಿ ಇಲ್ಲಿ ಏನಿಲ್ಲವೆಂದು ಸಾಗುತಿರಲು ಅನಿರೀಕ್ಷಿತವಾಗಿ ನಮಗೆ ಪ್ರಾಚೀನ ಧರ್ಮ ಸಂಸ್ಕೃತಿಯ ವೈಭವದ ಕುರುಹುಗಳೇ ಶಿವಗಂಗೆಯ ಸುತ್ತ ಮುತ್ತಣ ಪ್ರದೇಶದಲ್ಲಿ ಲಭ್ಯವಾಗುತ್ತವೆ.

ಈ ಪ್ರದೇಶದಲ್ಲಿ ಪ್ರಭಾವಪೂರ್ಣವಾಗಿ ವೀರಶೈವ ಧರ್ಮ ಸಂಸ್ಕೃತಿ ಬೆಳಗುವುದಕ್ಕೆ ಪ್ರಥಮ ಕಾರಣ ಸಿದ್ಧತ್ರಯರು ಮತ್ತು ರೇವಣಸಿದ್ಧರ ಮಗ ರುದ್ರಮುನಿ ಶಿವಾಚಾರ್ಯರಾದರೆ, 14ನೆಯ ಶತಮಾನದಿಂದ ಹರದನಹಳ್ಳಿ ಪೀಠಾಚಾರ್ಯರಾದ ಗೋಸಲ ಸಿದ್ಧೇಶ್ವರರು, ಅವರ ಶಿಷ್ಯರಾದ ಶಂಕರ ಸ್ವಾಮಿಗಳು, ಗುಬ್ಬಿಯ ಚೆನ್ನಬಸವೇಶ್ವರರು ಮತ್ತು ಮುಖ್ಯವಾಗಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಬೋಳಬಸವಾರ್ಯರೇ ಮೊದಲಾದ ನಿರಂಜನ ಜಗದ್ಗುರು ಪೀಠಾಧಿಕಾರಿಗಳೂ ಇನ್ನೊಂದು ಪ್ರಬಲ ಕಾರಣ. ಕ್ರಿ. ಶ. 1220 ನೆಯ ಇಸವಿಯ ಸುಮಾರಿನಲ್ಲಿ ನೆಲಮಂಗಲದ 88ನೆಯ ಶಾಸನದ ರೀತ್ಯಾ ಶಿವಗಂಗೆಯಲ್ಲಿ ಕೆಂಚಸೋಮನೆಂಬುವನ ಗಣಾರಾಧನೆಗೆ 12000 ಜನ ಒಡೆಯರು ಸೇರಿದ್ದರೆಂಬ ಅಂಶ ಬೆಳಕಿಗೆ ಬಂದಿದೆ.[17] ವೀರಶೈವ ಧರ್ಮೇತಿಹಾಸದಲ್ಲಿ ಶಿವಗಂಗೆ ಮತ್ತು ಸುತ್ತಮುತ್ತಣ ಪ್ರಾಂತದಲ್ಲಿರುವ ಸಿದ್ಧಗಂಗೆ, ಗೂಳೂರು, ಗುಬ್ಬಿ, ಕಲ್ಲೆಯ, ಗುಮ್ಮಳಾಪುರ ಮೊದಲಾದವುಗಳ ಚರಿತ್ರೆ ಅತ್ಯಂತ ಕುತೂಹಲಕಾರಿ ಮತ್ತು ರೋಮಾಂಚ.

17. ಶ್ರೀ ಚೆನ್ನಮಲ್ಲಿಕಾರ್ಜುನ : ರೇವಣಸಿದ್ಧರು ಪು. 234-35.

ಕಾರಿ. ಪ್ರಕೃತ ಆ ಎಲ್ಲ ಚರಿತ್ರೆಯನ್ನು ಇಲ್ಲಿ ಬರೆಯುವುದು ನಮ್ಮ ಉದ್ದೇಶವಲ್ಲ. ಸಿದ್ಧಗಂಗೆಯ ಅನತಿ ದೂರದಲ್ಲಿ ಆದ ಈ ವೀರಶೈವದ ಕ್ರಾಂತಿಯ ಕಾಲದಲ್ಲಿ ಸಿದ್ಧಗಂಗೆಯ ಪಾಲು ಅಧಿಕವೆಂದೂ 12ನೆಯ ಶತಮಾನದಲ್ಲಿಯೇ ಇದು ಅನೇಕ ಮಹಾಪುರುಷರ, ಶಿವಯೋಗಿಗಳ, ಸಿದ್ಧಪುರುಷರ ತಪೋಯೋಗ್ಯಸ್ಥಾನವಾಗಿತ್ತೆಂಬುದನ್ನು ತೋರಿಸಿಕೊಡುವುದೇ ಪ್ರಧಾನಾಂಶ. ಇಲ್ಲಿನ ಗುಹೆಗಳು ಅನಾದಿ, ಆದರೆ ಇದಕ್ಕೂ ಹಿಂದಿನ ಚರಿತ್ರೆಯ ಮೇಲೆ ಬೆಳಕನ್ನು ಚೆಲ್ಲಬಲ್ಲ ಇನ್ನಾವ ಅಂಶಗಳೂ ನಮಗೆ ಲಭ್ಯವಾಗುತ್ತಿಲ್ಲ. ಮೇಲಿನ ಕೆಲವಂಶಗಳನ್ನು ಗಮನಿಸಿ, ಷಟ್‌ಸ್ಥಲಜ್ಞಾನಿ ಶ್ರೀ ಚೆನ್ನಬಸವಣ್ಣನವರ ನಂತರ ನಿರಂಜನ ಜಗದ್ಗುರು ಪೀಠದ ಜಂಗಮಪುಂಗವರಾಗಿ ಸಿದ್ಧರಾಮೇಶ್ವರರೂ, ಆಚಾರ್ಯಪೀಠದ ಗುರುವರ್ಗದವರಾಗಿ ರೇವಣಸಿದ್ಧ, ಮರುಳಸಿದ್ಧ, ರುದ್ರಮುನಿ ಶಿವಾಚಾರ್ಯರೂ ಶಿವಗಂಗೆ, ಸಿದ್ಧಗಂಗೆಗಳ ಪರಿಸರದಲ್ಲಿ ಅನೇಕ ವರ್ಷ ತಮ್ಮ ಪ್ರಭಾವಪೂರ್ಣ ಕ್ರಾಂತಿಯನ್ನು ಮಾಡಿ ಕ್ರಿ. ಶ. 1250ರವರೆಗೂ ಧರ್ಮಜಾಗೃತಿಗೊಳಿಸಿ ಜನಮನದಲ್ಲಿ ಭಕ್ತಿಜೀವನವನ್ನು ಬಿತ್ತಿ ಸಾಮಾಜಿಕ ನೆಮ್ಮದಿಗೆ ಹೆಣಗಿದ ರೆಂಬುದನ್ನು ಮುಖ್ಯವಾಗಿ ತಿಳಿದರೆ ಸಾಕು. ಮುಂದೆ ಸಿದ್ಧರಾಮೇಶ್ವರು ಈ ಭಾಗದಲ್ಲಿ ಒಬ್ಬರೇ ಸಂಚಾರ ಕೈಗೊಂಡು ಅತ್ಯಂತ ಪ್ರಭಾವಯುತವಾಗಿ ವೀರಶೈವದ ಪ್ರಚಾರ ಮಾಡಿದುದೂ ಕಂಡುಬರುವುದು. ಅವರು ತಮ್ಮ ಕುರುಹನ್ನು ಸುಮಾರು ಈ ಭಾಗದಲ್ಲಿ ಅನೇಕ ಕಡೆ ಬಿಟ್ಟು ಹೋಗಿದ್ದಾರೆ. ಅನೇಕ ಊರುಗಳ ಹೆಸರುಗಳು ಸೊನ್ನಲಾಪುರ ಎಂದೇ ಉಳಿದಿವೆ. ಸಿದ್ಧರಾಮೇಶ್ವರರ ಗದ್ದುಗೆಗಳು ದೇವಾಲಯಗಳಿಗಂತೂ ಕೊರತೆಯಿಲ್ಲ. ಶೂನ್ಯಪೀಠಾಧೀಶ್ವರರಾಗಿ ಶರಣ ತತ್ತ್ವ ಪ್ರಚಾರ ಮಾಡುವುದು ತಮ್ಮ ಆದ್ಯಕರ್ತವ್ಯವೆಂದು ಇವರು ಹೆಣಗಿದುದು ವಾಸ್ತವವೇ ಆಗಿದೆ. ಆದರೆ ಮುಂದಿನ ಕರ್ನಾಟಕದ ಜನಜೀವನ ರಾಜಕೀಯ ಪಿಡುಗು, ಪೀಡೆಗಳಿಂದ ಜರ್ಝರಿತಗೊಂಡಿತು. ಸಮಸ್ತ ಹಿಂದೂ ಜನಾಂಗವೇ ಕಂಗಾಲಾಗುವ ಘೋರ ದಿನಗಳು ಒದಗಿದವು. ಹೀಗೆ ಅಸ್ತಗೊಂಡ ಜನಜೀವನ ಕ್ರಾಂತಿಯನ್ನು ಜನತೆ ನೋಡತೊಡಗಿತು.

**ಸಿದ್ಧೇಶ್ವರ ಪುರಾಣಗಳಲ್ಲಿ ಸಿದ್ಧಗಂಗೆಯ ಹೆಸರಿಲ್ಲ :**

ವಿರಕ್ತ ತೋಂಟದಾರ್ಯ (1560) ನ ಸಿದ್ಧೇಶ್ವರ ಪುರಾಣ ಮತ್ತು ಗುಬ್ಬಿಯ ಶಾಂತೇಶನ (1561) ಸಿದ್ಧೇಶ್ವರ ಪುರಾಣಗಳಲ್ಲಿ ಸಿದ್ಧಗಂಗೆಯ ಪ್ರಸ್ತಾಪವನ್ನು ಅವರು ಮಾಡದಿರುವುದರಿಂದ, ಸಿದ್ಧಗಂಗೆಯ ಪ್ರಾಚೀನತೆಯ ಬಗೆಗೆ ಸಂಶಯ ಪಡುವ ವಿದ್ವಾಂಸರೂ ಇದ್ದಾರೆ. 'ಸಿದ್ಧಗಂಗೆ' ಎಂಬ ಹೆಸರು ಇಲ್ಲ ಅಷ್ಟೆ : ಸಿದ್ಧಗಂಗೆಯಲ್ಲಿ ನಿಂತು ಅವರು ಆಚರಿಸಿದ ಪವಾಡಗಳು ಇವೆ ಎನ್ನಲು ಸಾಧ್ಯವಿದೆ. ಇವರಿಬ್ಬರೂ ಬರೆದ ತೋಂಟದ ಸಿದ್ಧಲಿಂಗ ಯತಿಯ ಚರಿತ್ರೆಯಲ್ಲಿ ಹೆಸರು ಇಲ್ಲದಿದ್ದುದು ಬಹು ಮುಖ್ಯವಲ್ಲ ಮತ್ತು ಅವರ ನಿಡುಬಾಳಿನ ಸಮಸ್ತ ಘಟನೆಗಳನ್ನು ಒಂದು ಚಿಕ್ಕ ಗ್ರಂಥದಲ್ಲಿ ತರುವುದೂ ಸಾಧ್ಯವಿಲ್ಲ. ಅವರಿಗೆ ಬೇಕಾಗಿರುವುದು ಅವರ ಜೀವನ ಚರಿತ್ರೆಯ ಮಧ್ಯದಲ್ಲಿ ವೀರಶೈವದರ್ಶನವನ್ನು ಸಾಧ್ಯವಾದಷ್ಟು ಗುರುವು ಶಿಷ್ಯನಿಗೆ ಬೋಧಿಸಿದಂತೆ ಕಲ್ಪಿಸಿ ಹೇಳುವುದು. ಸುಮಾರು 80-90 ವರ್ಷಗಳಷ್ಟು ನಿಡು ಬಾಳು ಬಾಳಿರಬಹುದಾದ ಸಿದ್ಧಲಿಂಗೇಶ್ವರರ ಜೀವನದಲ್ಲಿ ನಡೆದುವೆನ್ನಬಹುದಾದ ಜನರ ಬಾಯಲ್ಲಿನ ಪವಾಡ ಘಟನಾವಳಿಗಳನ್ನು ಅವರ ಜೀವನದೊಡನೆ ಬೆಳೆಸಿ ಅದ್ಭುತ ರಮ್ಯಮಾಡಿ ಅಂದಿನ ಜನಜೀವನಕ್ಕೆ ಹಿಡಿಸುವ ರೀತಿಯಲ್ಲಿ ಕಾವ್ಯ ರಚನೆ ಮಾಡುವುದು ಅವರ ಕೆಲಸವಾಗಿತ್ತು. ಇದೂ ಅಲ್ಲದೆ ಶಿವಯೋಗಿಗಳ ದಿನದಿನದ ಎಲ್ಲ ಜೀವನ ವೃತ್ತವನ್ನು ಕಾವ್ಯದಲ್ಲಿ ತರುವುದು ಸಾಧ್ಯವಿಲ್ಲ ; ಸಾಧುವೂ ಅಲ್ಲ. ಇವರು ಬರೆದುದು ಪುರಾಣಗ್ರಂಥ ! ಅದು ದಿನಚರಿಯ ಚರಿತ್ರೆಯಂತೂ ಅಲ್ಲ. ಆ ರೀತಿಯ ಪುರಾಣ ಸಂಪ್ರದಾಯದ ಬರವಣಿಗೆಯಲ್ಲಿ ಇವರು 'ಸಿದ್ಧಗಂಗೆ' ಎಂದು ಹೆಸರು ಹೇಳದಿದ್ದರೂ ಹೇರಂಬನ ಸಾಂಗತ್ಯ ಗ್ರಂಥ ಮತ್ತು 'ನಿರಂಜನವಂಶರತ್ನಾಕರ'ಗಳು ಹೆಸರು ಹೇಳಿ ಅವರು ಬಿಟ್ಟ ಕೆಲವು ಘಟನೆಗಳನ್ನು ತಮ್ಮ ಕಾವ್ಯ ಮತ್ತು ಚರಿತ್ರೆಗಳಲ್ಲಿ ತಂದು ಈ ಕ್ಷೇತ್ರದ ಪ್ರಾಚೀನತೆಯ ಬಗೆಗಿನ ಕೆಲವರ ಸಂಶಯವನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸಿವೆ. ಯಾವುದೋ ಒಂದು ಕಾವ್ಯದಲ್ಲಿ ಹೆಸರೆತ್ತಿ ಈ ಬಗೆಗೆ ಹೇಳಿಲ್ಲವೆಂದಾಕ್ಷಣಕ್ಕೆ ಅದರ ಅಸ್ತಿತ್ವದ ಬಗೆಗೆ ಅಲ್ಲಗಳೆಯುವುದು ಸಮಂಜಸವೂ ಅಲ್ಲ ; ಸಾಧುವೂ ಅಲ್ಲ. ದೇವರಾಯಪಟ್ಟಣದಲ್ಲಿ ಒಂದು ಮಡಿಕೆ

ಅನ್ನ 500 ಜನ ಜಂಗಮರಿಗೆ ಆಹಾರವಾದ ಒಂದು ಪವಾಡ ನಡೆದಿದೆಯೆಂದು ಸಿದ್ಧೇಶ್ವರ ಪುರಾಣ, ಹೇರಂಬನ ಸಾಂಗತ್ಯ, ಸಿದ್ಧಲಿಂಗೇಶ್ವರ ಸಾಂಗತ್ಯ ಗ್ರಂಥಗಳಲ್ಲೆಲ್ಲ ಉಕ್ತವಾಗಿದೆ. ದೇವರಾಯಪಟ್ಟಣದ ಭೂಮಿಯಲ್ಲಿಯೇ ಸಿದ್ಧಗಂಗೆಯಿರುವುದು. ಸಿದ್ಧಲಿಂಗೇಶ್ವರರು ಸಿದ್ಧಗಂಗೆಯಲ್ಲಿದ್ದಾಗಲೇ ಈ ಘಟನೆ ನಡೆದುದೆಂದು ಭಾವಿಸಬೇಕಲ್ಲದೆ ಈ ಘಟನೆಯ ಬಗ್ಗೆ ಅನ್ಯಥಾ ಭಾವಿಸುವುದು ತಪ್ಪು. ಅದರಂತೆ ತುಮಕೂರಿನಲ್ಲಿ ನಡೆದ ಭಸ್ಮದ ಗಟ್ಟಿಯನ್ನು ವೈಷ್ಣವನಿಗೆ ಲಿಂಗ ಮಾಡಿಕೊಟ್ಟ ಘಟನೆಯೂ ಇಲ್ಲಿನ ಇನ್ನಿತರ ಘಟನೆಗಳೂ ಇವರು ಸಿದ್ಧಗಂಗೆಯಲ್ಲಿ ವಾಸ್ತವ್ಯ ಮಾಡಿದಾಗಲೇ ಎನ್ನಲು ಅನುಮಾನವೇಕೆ? ಸಿದ್ಧಗಂಗೆ ಅವರ ವಾಸ್ತವ್ಯ ಸ್ಥಾನ. ಇಲ್ಲಿನ ಮಠ ಅವರ ಖಾಸಾ ಮ.ಠ. ಹರದನಹಳ್ಳಿ ಶೀಲಾಚಾರ್ಯರ ಒಂದ ವಸಾಹತು.[18] ಅವರು ಈ ಭಾಗದ ಸಂಚಾರಕ್ಕೆ ಬಂದಾಗ ಸಿದ್ಧಗಂಗಾ ಕ್ಷೇತ್ರದಲ್ಲಿಯೇ ತಮ್ಮ ವಾಸ್ತವ್ಯ ಮಾಡುತ್ತಿದ್ದರಲ್ಲದೆ ಅವರು ಸತತ ಗೊತ್ತುಗುರಿಯಿಲ್ಲದೆ ಊರೂರು ತಿರುಗುತಿದ್ದರೆಂದಲ್ಲ. ಸಿದ್ಧೇಶ್ವರಪುರಾಣ, ತೋಂಟದ ಸಿದ್ಧಲಿಂಗೇಶ್ವರ ರಗಳೆಗಳಲ್ಲಿ ತುಮಕೂರಿನಲ್ಲಿ ನಡೆದ ಎರಡು ಪವಾಡಗಳು, ರಗಳೆಯಲ್ಲಿ ಕೇತಸಮುದ್ರ (ಕೇತ ಶರಧಿ)ದಲ್ಲಿ ನಡೆದ ಎರಡು ಪವಾಡಗಳು ಇವೆಲ್ಲವೂ ಸಿದ್ಧಗಂಗೆಯಲ್ಲಿ ಸಿದ್ಧಲಿಂಗೇಶ್ವರರು ಉಳಿದ ದಿನಗಳಲ್ಲಿ ನಡೆದುವೆಂದು ದೃಢವಾಗಿ ತಿಳಿಯುವುದು ಒಳಿತು. ಕೇತಶರಧಿಯೂ ಸಿದ್ಧಗಗೆಂಯೂ ಒಂದೇ ; ಈಗ ಕೇವಲ 2 ಫರ್ಲಾಂಗುಗಳ ಅಂತರದಲ್ಲಿರುವ ಸ್ಥಾನ ವಿಶೇಷಗಳು ಸಿದ್ಧಗಂಗೆಯ ಅರ್ಧಭಾಗ, ಕೇತ ಸಮುದ್ರದ ಗಡಿಯಲ್ಲಿಯೇ ಇವೆ. ಅಲ್ಲದೆ ತಮ್ಮ ಹಿಂದೆ ಬಂದ ಚರಮೂರ್ತಿಗಳಿಗೆಲ್ಲ ಬಿಡಾರ ಮಾಡಿಕೊಟ್ಟಿದ್ದುದು ಸಿದ್ಧಗಂಗೆಯಲ್ಲಿರುವ ಅನೇಕ ಗವಿಗಳಲ್ಲಿಯೇ ! ಸಿದ್ಧಲಿಂಗೇಶ್ವರರ ಪ್ರಮುಖ ಶಿಷ್ಯರಲ್ಲೊಬ್ಬರಾದ ದೊಡ್ಡ ಸಿದ್ಧಪ್ಪನವರ ಹೆಸರಿನ ಗವಿ ಇಂದಿಗೂ ರಾಮಲಿಂಗೇಶ್ವರನ ಬೆಟ್ಟದಲ್ಲಿರುವುದನ್ನು ಕಾಣಬಹುದಾಗಿದೆ. ಅದರಂತೆಯೇ ಅದರ ಪಕ್ಕದಲ್ಲಿಯೇ ಚಿಕ್ಕಸಿದ್ಧಪ್ಪನ ಗವಿಯು ಇದೆ.* ಇವೆರಡು ಭವ್ಯವಾದ ಗವಿಗಳೇ ಆಗಿವೆ. ದೊಡ್ಡಸಿದ್ದಪ್ಪನ ಗವಿ ಕಡೆದ ಕಲ್ಲಿನ ಬಾಗಿಲುವಾಡದಿಂದ ಕೂಡಿದ್ದಾಗಿ ಮೊದಲ ಹತ್ತಿಪ್ಪತ್ತಡಿಗಳಷ್ಟು ದೂರ ತೆವಳಿಕೊಂಡು ಹೋದ ಮೇಲೆ ಇನ್ನೊಂದು ಬಾಗಿಲು ಸಿಗುವುದು. ಆ ಬಾಗಿಲನ್ನು ದಾಟಿದೊಡನೆಯೇ ನಂದಿಯ ಮಂಟಪ. ಆ ನಂದಿಯ ಮಂಟಪ ದಾಟಿದೊಡನೆ ಇನ್ನೊಂದು ಬಾಗಿಲು ಸಿಗುವುದು. ಅದನ್ನು ದಾಟಿದ ಮೇಲೆ ವಿಶಾಲವಾದ ಬಯಲು. ಆ ಬೈಲಿನ ಮಧ್ಯದಲ್ಲೊಂದು ಶಿವಲಿಂಗ 50-60 ಜನಗಳು ಕುಳಿತು ಶಿವಾನುಭವ ಗೋಷ್ಠಿಗಳನ್ನು ನೆರವೇರಿಸುವಷ್ಟು ವೈಶಾಲ್ಯ ಅಲ್ಲಿದೆ. ನಂದಿ ಮಂಟಪದ ಸುತ್ತು ಮುತ್ತಲೂ 40-50 ಜನ ಕೂಡುವಷ್ಟು ತಾಣವಿದೆ. ಸಿದ್ಧಗಂಗೆಯ ಮಹಿಮಾಮೂರ್ತಿ ಉದ್ದಾನಶಿವಯೋಗಿಗಳವರಿಗೂ ಈ ಗವಿಗೂ ಬಹಳ ಸಂಬಂಧ ಇತ್ತು. ಆಗಾಗ ಇಲ್ಲಿಗೆ ಒಬ್ಬರೇ ಹೋಗಿ ಬರುತ್ತಿದ್ದುದುಂಟು. ರಾತ್ರಿ ವೇಳೆಯಲ್ಲಿ ಒಬ್ಬರೇ ಅಲ್ಲಿಗೆ ಹೊರಟಾಗ ಅನೇಕರು ಹಿಂಬಾಲಿಸಿ ಹೋಗಿ ಅದ್ಭುತ ಘಟನೆಗಳನ್ನು ಕಂಡವರು ಇನ್ನೂ ಅಕ್ಕಪಕ್ಕದ ಹಳ್ಳಿಗಳಲ್ಲಿದ್ದಾರೆ. ಹಗಲಿನಲ್ಲೇ ಹೋಗಲು ಕಷ್ಟವಾಗುವ ಆ ಸ್ಥಾನಕ್ಕೆ ಅಮಾವಾಸೆಯ ರಾತ್ರಿಯಲ್ಲೂ ಉದ್ದಾನ ಶಿವಯೋಗಿಗಳು ಹೋಗುತ್ತಿದ್ದುದು ಅತ್ಯಂತ ರೋಮಾಂಚಕಾರಿ ಅಂಶ. ಅವರು ತಮ್ಮ ಶಿವಯೋಗ ಸಾಮರ್ಥ್ಯದಿಂದ ಮೃಗ ಬಾಧಾನಿವಾರಣೆಯನ್ನು ಪಡೆದವರಾಗಿದ್ದರು. ಈ ವಿಷಯವನ್ನು ಹಿಂದೆ ವಿವರಿಸಿದೆ. ಇಷ್ಟೆಲ್ಲ ವಿಪುಲ ಅವಶೇಷಗಳು ಸಿದ್ಧಗಂಗೆಯ ಪ್ರಾಚೀನತೆಯನ್ನು ದೃಢೀಕರಿಸುವಲ್ಲಿ ನೆರವಾಗುತ್ತಿದ್ದರೂ, ಡಾ|| ಎಲ್ ಬಸವರಾಜು ಅವರು ಸಿದ್ಧಗಂಗಾ ಕ್ಷೇತ್ರದ ಪ್ರಾಚೀನತೆಯನ್ನು ಒಪ್ಪಿ, ಮಠದ ಪ್ರಾಚೀನತೆಯನ್ನು ಒಪ್ಪಿದಂತೆ ಇಲ್ಲ. ಅವರು ಹೇರಂಬನು ಈ ಸಿದ್ಧಗಂಗೆಯಲ್ಲಿ ಮಠವೊಂದು ಇದ್ದಿತೆಂದಾಗಲಿ, ಅಲ್ಲಿ ಯಾರಾದರೊಬ್ಬರು ಸ್ವಾಮಿಗಳಿದ್ದರೆಂದಾಗಲಿ ಹೇಳದಿರುವುದರಿಂದ ಇಂದಿನ ಸಿದ್ಧಗಂಗಾ ಮಠವು ಕಡೆಯ ಪಕ್ಷ 1719-1761 ಕ್ಕಿಂತ ಈಚಿನದೆನ್ನಬಹುದೆನಿಸುವುದು'[19]

---

18. ಫ. ಗು. ಹಳಕಟ್ಟಿ: ಶಿವಶರಣರ ಚರಿತ್ರೆ, ಭಾ. 2, ಪು. 288.

* ಈ ಚಿಕ್ಕಸಿದ್ದಪ್ಪ ಯಾರೆಂದು ತಿಳಿಯುವುದು ಕಷ್ಟವಾಗಿದೆ. ಇವನೂ ಬಹುಶಃ ತೋಂಟದ ಸಿದ್ಧೇಶ್ವರ ಸ್ವಾಮಿಗಳ ಶಿಷ್ಯರಲ್ಲಿದ್ದ ಇನ್ನೊಬ್ಬ ಸಿದ್ಧೇಶ್ವರರಾಗಿರಬಹುದು.

19. ಬೆಂಗಳೂರು ವಿ ವಿ. ಪ್ರಕಟಣೆ: ವಚನಕಾರ ಸಿದ್ದಲಿಂಗ ಯತಿ ಪುಟ 66 ಅಡಿ ಟಿಪ್ಪಣಿ.

ಎಂದಿದ್ದಾರೆ. ಇಲ್ಲಿ 'ಮಠ'ವೆಂದರೆ ಲಕ್ಷ್ಯಾರ್ಥ ಅಥವಾ ಸಮಾಜ ರೂಢಿಯಿಂದ ಶಿವಯೋಗಿಗಳು ವಾಸಿಸುವ ಸ್ಥಾನವೇ ಅಲ್ಲದೆ ಬೇರಲ್ಲ. ಇಲ್ಲಿನ ಕ್ಷೇತ್ರವೂ ಮಠವೂ ಎರಡೂ ಅನ್ಯೋನ್ಯ ಸಂಬಂಧದವು. 'ಮಠ' ಶಬ್ದಕ್ಕಿರುವ ವಾಚ್ಯಾರ್ಥವನ್ನಿಲ್ಲಿ ಗಮನಿಸಬೇಕಾಗಿಲ್ಲ. ಪೂರ್ವದಲ್ಲಿ ಸಿದ್ಧಗಂಗಾ ಬೆಟ್ಟದ ಮೇಲೆಯೇ ಇರುವ ಕಟ್ಟಡವನ್ನೇ ಮಠವೆಂದು ತಿಳಿದರೂ ಬಾಧಕವಿಲ್ಲ. ಮೊದಮೊದಲು ದಾಸೋಹ ಅಲ್ಲಿಯೇ ಇತ್ತು. ಅಲ್ಲಿ ಛಾತ್ರಗಣವಿದ್ದೇ ತೀರಬೇಕೆಂಬ ನಿಯಮವೇನೂ ಇಲ್ಲ. ನಿರಂಜನವಂಶರತ್ನಾಕರದ ಪ್ರಕಾರ ಗೋಸಲಸಿದ್ಧೇಶ್ವರರು ತಮಗಾಗಿ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದು ಮಠವನ್ನು ಕಟ್ಟಿಸಿಕೊಂಡರೆಂದು ಸ್ಪಷ್ಟವಾಗಿ ಹೇಳಲಾಗಿದೆ. ಹರದನಹಳ್ಳಿ ಪೀಠಾಚಾರ್ಯರು ತಾವು ಬಿಡಾರ ಮಾಡಿದ ಕಡೆಗಳೆಲ್ಲೆಲ್ಲ ಆ ಭಾಗದ ಜನಗಳ ನಿಚ್ಚ ನಿಚ್ಚ ಆಚಾರ ವಿಚಾರ ಶುದ್ಧಿಗೆ ಓರೋರ್ವ ವಿರಕ್ತರನ್ನು ನೆಲೆಗೊಳಿಸುತ್ತಿದ್ದರು. ವಿರಕ್ತರ ಆ ನೆಲೆಗಳೇ ಮಠಗಳಾಗಿ ಮುಂದುವರಿಯುತ್ತಿದ್ದವು. ಆ ಮಠಗಳ ಸಂಪತ್ತು ಸುತ್ತಮುತ್ತಲ ಜನಗಳೇ ಆಗಿರುತ್ತಿದ್ದರು. ಸಿದ್ಧಲಿಂಗೇಶ್ವರ ಸಾಂಗತ್ಯದಲ್ಲಿ ಬರುವ*ಈ ಪದ್ಯದಿಂದ ಸಿದ್ಧಲಿಂಗೇಶ್ವರರು ವಿರಕ್ತ ಮಠಸಂಪ್ರದಾಯವನ್ನು ಹೇಗೆ ಬೆಳೆಸಿ ಭೂಶುದ್ಧಿ ಮಾಡುತ್ತಿದ್ದರೆಂಬುದನ್ನರಿಯಬಹುದು. ಆ ವಿರಕ್ತರು ವಾಸಿಸುವ ಸ್ಥಾನಗಳೆಲ್ಲ 'ಮಠ"ಗಳೇ ಆದುವು. ಮಠ ಶಬ್ದವನ್ನಿಲ್ಲಿ ಜಂಗಮರು ವಾಸ ಮಾಡುವ ಮನೆಯೇ ಎಂದು ತಿಳಿಯಬೇಕು. ಜಂಗಮರನ್ನು ನೆಲೆಗೊಳಿಸಿದರೆನ್ನುವುದೂ ಒಂದೇ, ಮಠವನ್ನು ಸ್ಥಾಪಿಸಿದರೆನ್ನುವುದೂ ಒಂದೆ 'ಮಠ ಶಬ್ದಕ್ಕಿರುವ ಮಠಶ್ಛಾತ್ರಾದಿನಿಲಯಃ' ಎಂಬ ಅಮರಕೋಶದ ಅರ್ಥಕ್ಕೆ ತಕ್ಕೆ ಬಿದ್ದು ಮೈ ನೋಯಿಸಿಕೊಳ್ಳಬೇಕಾದುದೇನೂ ಇಲ್ಲ. ಈಗಲೂ ಅನೇಕ ಗೃಹಸ್ಥರ ಮನೆಗಳಿಗೆ ಚಿಕ್ಕಮಠ, ದೊಡ್ಡಮಠ, ಹಿರೇಮಠ ಇತ್ಯಾದಿ ನಾಮಾಂತರಗಳ ವ್ಯವಹಾರವಿರುವುದನ್ನು ಗಮನಿಸಬೇಕು. ಈಗ ಸಿದ್ಧಗಂಗೆಯಲ್ಲಿ ಹಳೆಯ ಮಠವೆಂದು ಕರೆಯುವ ಮಠ ಭವ್ಯವಾದ 4 ಅಡಿ ದಪ್ಪನೆಯ ಪ್ರಕಾರದಿಂದ ಆವೃತವಾಗಿ ಮಧ್ಯದಲ್ಲಿ ಆಗಮೋಕ್ತ ವಾಸ್ತುಶಿಲ್ಪ ಕ್ರಮವಿಡಿದು ಕಟ್ಟಿದ ಕಟ್ಟಡ· ಅದರ ಪ್ರಾಚೀನತೆಗೊಂದು ನಿದರ್ಶನ. ಆದರೆ ಅದರ ಅನೇಕ ಭಾಗಗಳು ಕಾಲಕಾಲಕ್ಕೆ ಬದಲಾವಣೆ ಹೊಂದಿ ಇಂದಿನ ಸ್ಥಿತಿಯಲ್ಲಿವೆ. ಶ್ರೀ ಶಿವಕುಮಾರ ಸ್ವಾಮಿಗಳ ಕಾಲದಲ್ಲೂ ಅನೇಕ ಮಾರ್ಪಾಡುಗಳು ಅಲ್ಲಿ ಆಗಿವೆ. ಒಂಭತ್ತು ಕಂಬಗಳ ಪಡಸಾಲೆಯ ಭಾಗ, ಆ ಕಂಬಗಳ ಮೇಲೆ ಕೆತ್ತಿಸಿರುವ ವಿಗ್ರಹಗಳು ಮಠದ ಪ್ರಾಚೀನತೆಯನ್ನು ಸಾರುವ ಕುರುಹುಗಳಾಗಿವೆ. ಗೋಸಲ ಸಿದ್ಧೇಶ್ವರರ ಕಾಲದ ಮಠ ಇದೇ ಎಂದು ಗ್ರಹಿಸಲಾಗುತ್ತಿದೆ. ಒಂದು ವೇಳೆ ಇದರ ಪ್ರಾಚೀನತೆಯ ಬಗೆಗೆ ಸಂಶಯ ತಾಳಿದರೂ ಬೆಟ್ಟದ ಮೇಲೆ ಸಿದ್ಧಲಿಂಗೇಶ್ವರ ಸ್ವಾಮಿಯ ವಿಗ್ರಹವಿರುವ ಕಟ್ಟಡದ ಸುತ್ತಮುತ್ತಲಿರುವ ಗುಹಾದಿ ಕಟ್ಟಡಗಳಂತೂ ಪ್ರಾಚೀನವಾಗಿದ್ದು, ಅದನ್ನೇ ಪ್ರಾಚೀನ ಮಠವೆಂದು ಗ್ರಹಿಸಬೇಕು. ಇವೆಲ್ಲ ಕಾಲ ಕಾಲಕ್ಕೆ ಜೀರ್ಣೋದ್ಧರವಾಗಿ ಮೂಲ ರೂಪವನ್ನು ಬದಲಾಯಿಸಿವೆ. ಅಂತೂ ಮಠದ ಪ್ರಾಚೀನತೆಯ ಬಗೆಗೆ ಸಂಶಯವೇನೂ ಇಲ್ಲ. ಪಂಡಿತ ನಾಗಭೂಷಣಶಾಸ್ತ್ರಿಗಳು ಅಡವಿಸ್ವಾಮಿಗಳು ಇಲ್ಲಿನ ಮಠ ಸ್ಥಾಪಿಸಿದರು²⁹ ಎಂದಿದ್ದಾರೆ. ಇವೆಲ್ಲ ಸಿದ್ಧಗಂಗೆಯನ್ನು ನೋಡದೆ ಅದರ ಬಗೆಗೆ ವಿಚಾರಿಸದೆ ಬರೆದ ಬರವಣಿಗೆಗಳಲ್ಲದೆ ವಿದ್ವಾಂಸರು ಇವಕ್ಕೆ ಬೆಲೆ ಕೊಡಲಾಗುವುದಿಲ್ಲ. ಇಂತಿಂಥ ವಿದ್ವಾಂಸರ ಹಿಂದೆ ಮುಂದೆ ನೋಡದೆ ಹೀಗೆ ಬರೆಯುತ್ತಿರುವುದಕ್ಕೆ ಆಶ್ಚರ್ಯ ವ್ಯಕ್ತಪಡಿಸಬೇಕಾಗುತ್ತದೆ, ಅಷ್ಟೆ. ಅಡವಿ ಸ್ವಾಮಿಗಳೆಂಬುವರು ಈ ಮಠದ ಅಧಿಕೃತ ಸ್ವಾಮಿಗಳೇ? ಅವರು ವಿರಕ್ತ ಮೂರ್ತಿಗಳೇ? ಎಂಬುದು ಇನ್ನೂ ಅನುಮಾನ. ಆದರೆ ಅವರು ಸಾಧಿಸಿದ ಶಿವಯೋಗದ ಮೇಲ್ಮೆಯಿಂದ ಅವರು ಯಾವ ಜಂಗಮರಿಗಿಂತಲೂ ಕಡಿಮೆಯವರಲ್ಲವೆಂಬುದಂತೂ ನಿಜ. ಅವರ ಪೂರ್ವದ ಸ್ಥಳ ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೋಕಿನ ಕೂಡಲ ಗ್ರಾಮ. ಅಲ್ಲಿನ ವಿರಕ್ತಮಠದಿಂದ ೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಗುಬ್ಬಿಗೆ ಆಗಮಿಸಿ ಅಲ್ಲಿಂದ ಕ್ರಿ. ಶ. ಸುಮಾರು ೧೮೬೫ರ ಹೊತ್ತಿಗೆ ಸಿದ್ಧಗಂಗೆಗೆ ಬಂಥು ಸಿದ್ಧಗಂಗೆಯ ಸುಸ್ಥಿತಿಗೆ ಮತ್ತು ಅಭಿವೃದ್ಧಿಗೆ ಕಾರಣರಾದ ಕಾರಣ ಪುರುಷರು. ಅವರು ಸಿದ್ಧಗಂಗೆಗೆ ಬಂದಾಗಲೂ ಸಿದ್ಧಗಂಗೆಯಲ್ಲಿ ಶ್ರೀ. ನಿ.ಪ್ರ.

---

ದೇಶದೇಶಕೆ ವಿರಕ್ತರನೊಬ್ಬರ| ಲೇಸಾಗಿ ನೇಮಿಸಿ ಮಠಗಿ| ಭೂ ಶದ್ಧಿಯನು ಮಾಡಿ ಕಲಿಯ ಕಟ್ಟಾಳಿದ ದೋಷರಹಿತಸಿದ್ಧಲಿಂಗ 19.17

20. ಸಾವಧಾನ ಸಂಚಿಕೆ 22, ಸಂಪುಟ 24, ಪುಟ 1.

ಸಿದ್ಧಲಿಂಗಸ್ವಾಮಿಗಳೆಂಬ ಹೆಸರಿನ ಅಧಿಕೃತ ಸ್ವಾಮಿಗಳಿದ್ದರು. ಅವರು ತುಂಬಾ ಮುಗ್ಧರು. ಏನೂ ಅರಿಯದವರು. ಆದುದರಿಂದ ಮಠದಸ್ಥಿತಿ ಹೀನಾವಸ್ಥೆಗೆ ಬಂದಿತ್ತು. ಆಗ ಅಡವಿಸ್ವಾಮಿಗಳು ಈ ಮಠಕ್ಕೆ ಬಂದರು. ಅವರು ದಾಸೋಹ ಕ್ರಿಯೆಗಳೇ ಮೊದಲಾದವನ್ನು ಪ್ರಾರಂಭಿಸಿದರು ಕೊನೆಗೆ ಸಿದ್ಧಲಿಂಗಸ್ವಾಮಿಗಳು ಆಡಳಿತವನ್ನೆಲ್ಲ ಅವರಿಗೆ ಒಪ್ಪಿಸಿದರು. ಅಡವಿ ಸ್ವಾಮಿಗಳೇ ಮುಂದೆ ಮಠದ ಸಮಸ್ತ ಆಗುಹೋಗುಗಳಿಗೆ ಕಾರಣರಾದರು. ಕೊನೆಗೆ ಅವರೂ ಉದ್ದಾನಪ್ಪ ಸ್ವಾಮಿಗಳಿಗೆ ಮಠವನ್ನೊಪ್ಪಿಸಿ ತಾವು ಕೊಟ್ಟಿಲಕೆರೆಯಲ್ಲಿ ಅಭಿವೃದ್ಧಿಗೆ ತಂದ ಮಠದಲ್ಲಿ ಲಿಂಗೈಕ್ಯರಾಗುವುದಕ್ಕೂ ಇದೇ ಕಾರಣ.[21] ಮೇಲಾಗಿ ಅಡವಿಸ್ವಾಮಿಗಳವರು ಬೆಟ್ಟದ ಮೇಲಿನ ಅಮ್ಮನವರ ಗವಿಯ ಮಠದಲ್ಲಿಯೇ ವಾಸ್ತವ್ಯ ಮಾಡಿದ್ದರಲ್ಲದೆ ಕೆಳಗಿನ ಮಠದ ಸಿದ್ಧಲಿಂಗ ಸ್ವಾಮಿಗಳವರ ವ್ಯವಹಾರದಲ್ಲಿ ಮೊದಮೊದಲ ಕೈ ಹಾಕುತ್ತಲೆ ಇರಲಿಲ್ಲ. ಅವರ ದಾಸೋಹ ಮತ್ತು ಪಾಠಶಾಲೆಗಳ ವ್ಯಾಪ್ತಿಯು ಬೆಟ್ಟದ ಮೇಲಿನ ಮಠಕಷ್ಟೇ ಸೀಮಿತವಾಗಿತ್ತು. ಸಿದ್ಧಲಿಂಗ ಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಕೆಳಗಿನ ಮಠದ ಅಧಿಕಾರವೂ ಅವರದಾಗಲು ಕಾರಣವಾಯಿತು. ಸಿದ್ಧಲಿಂಗಸ್ವಾಮಿಗಳು ತಾವಿರುವಾಗಲೇ ಮಠದ ಉತ್ತರಾಧಿಕಾರಿಗಳನ್ನು ಮಾಡಿಲ್ಲವಾದ್ದರಿಂದ ಮಠದ ಸಮಸ್ತ ವ್ಯವಹಾರವು ಅಡವಿಸ್ವಾಮಿಗಳದೇ ಆಯಿತು. ಮುಂದೆ ಅವರು ಮಠಕ್ಕೆ ಉದ್ದಾನ ಶಿವಯೋಗಿಗಳವರನ್ನು ನೇಮಿಸಿ ಹೊರಟು ಹೋದುದರಲ್ಲಿ ಬಹಳ ಅರ್ಥವಡಗಿದೆ. ಆ ಕಾಲದಲ್ಲಿ ಉದ್ದಾನಪ್ಪನವರನ್ನು ಕಾರಣಪುರುಷರೆಂದು ಕಂಡವರು ಅಡವಿಸ್ವಾಮಿಗಳೊಬ್ಬರೆ. ಅಧಿಕಾರ ವಹಿಸಿಕೊಂಡಂದಿನಿಂದ ಉದ್ದಾನಪ್ಪನವರ ತೇಜೋವಿಶೇಷದ ಅರಿವು ಎಲ್ಲರಿಗೂ ಆಗತೊಡಗಿತು. ಅಡವಿಸ್ವಾಮಿಗಳ ಪ್ರಭಾವಲಯ ಅತ್ಯಂತ ಮಹತ್ವದ್ದಾಗಿತ್ತು. ಅವರ ಸತ್ಸಂಕಲ್ಪ ಶಕ್ತಿಯೇ ಉದ್ದಾನ ಶಿವಯೋಗಿಗಳವರು ಮಠವನ್ನು ಅಭಿವೃದ್ಧಿಗೊಳಿಸಲು ಕಾರಣವಾಯಿತೆಂದು ಅನೇಕ ಸಲ ಉದ್ದಾನ ಸ್ವಾಮಿಗಳು ತಮ್ಮ ಶಿಷ್ಯರಲ್ಲಿ ಹೇಳಿಕೊಂಡಿದ್ದಾರೆ. ಆದ್ದರಿಂದ ಶ್ರೀ ನಾಗಭೂಷಣ ಶಾಸ್ತ್ರಿಗಳ ಹೇಳಿಕೆ ಸಮಂಜಸವಲ್ಲದು. ನಿರಂಜನ ವಂಶರತ್ನಾಕರದಲ್ಲಿ 'ಸಿದ್ಧಗಂಗಾ ಮಠದ ಸಿದ್ಧಲಿಂಗಪ್ಪನವರ ಬುಡಕಟ್ಟಿನ ಐದು ಜನ ಚರಮೂರ್ತಿಗಳನ್ನು ಹೇಳಲಾಗಿದೆ.[22] ಈ ಬುಡಕಟ್ಟಿಗೆ ಸೇರಿದ 5 ಜನ ಚರಮೂರ್ತಿಗಳು ಯಾವ ಯಾವ ಮಠದವರೆಂಬದನ್ನು ಹೇಳಿಲ್ಲ. ಆದ್ದರಿಂದ ಹಿಂದಿನಿಂದಲೂ ಅಂದರೆ ಗೋಸಲ ಸಿದ್ಧೇಶ್ವರರ ಕಾಲದಿಂದಲೂ (ಕ್ರಿ. ಶ. 1300) ಇಲ್ಲಿ ಮಠವೂ ಜಂಗಮಮೂರ್ತಿಗಳೂ ಇದ್ದದು ಸೂರ್ಯನಷ್ಟೇ ನಿಚ್ಚಳ ಮತ್ತು ಸತ್ಯ. **(ಮುಂದುವರೆಯುತ್ತದೆ)**

---

ಸಿದ್ಧಗಂಗಾ ಮಠಕ್ಕೆ ಇಲ್ಲಿನ ಧರ್ಮಕಾರ್ಯಕ್ಕೋಸುಗ ಸಿದ್ಧಗಂಗಾ ಪಾಳ್ಯ ಬೊಮ್ಮನಹಳ್ಳಿ ಎಂಬ ಎರಡು ಇನಾಂಗ್ರಾಮಗಳು ಇದ್ದವು. ಇನಾಮತಿಯನ್ನು ಯಾರು ಹಾಕಿಕೊಟ್ಟಿದ್ದರೋ ತಿಳಿಯದು, ೧೮೬೦ ಕ್ಕೂ ಹಿಂದೆ ಸರಕಾರದವರು ಮಠದ ಆಡಳಿತ ಸರಿಯಿಲ್ಲವೆಂದು ಇನಾಮತಿಯನ್ನು ಕಿತ್ತುಕೊಂಡರು. ಉದ್ದಾನಸ್ವಾಮಿಗಳು ಈ ಇನಾಮತಿ ಪಡೆಯಲು ೧೯೧೩ರಲ್ಲಿ ಪ್ರಯತ್ನಿಸಿ ಸಾಧ್ಯವಾಗದೆಬಿಟ್ಟಂತೆ ಹಳೆಯ ದಾಖಲೆಗಳಿಂದ ತಿಳಿದು ಬರುವುದು. 22 ಶ್ರೀ ಚನ್ನಮಲ್ಲಿಕಾರ್ಜುನ (ಸಂ) ನಿ. ವಂ. ರತ್ನಾಕರ-ಭಾಗ 2. ಪುಟ 28

# ಕೂಡಲ ಸಂಗಮ ಕ್ಷೇತ್ರ ಉಳಿದೀತೆ ? ಉಳಿಸುವುದು ಪ್ರತಿಯೊಬ್ಬರ ಕರ್ತವ್ಯ

— ಕೆ. ಎಂ. ಶಿವಲಿಂಗಯ್ಯ

ಕರ್ನಾಟಕ ರಾಜ್ಯದ ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿಗೆ ಸೇರಿದ ಜಗಜ್ಜ್ಯೋತಿ ಬಸವೇಶ್ವರ ಅಧ್ಯಾತ್ಮಿಕ ತಪೋಭೂಮಿಕೆಯೂ, ಭಾರತೀಯರ ಹಲವು ಜ್ಯೋತಿರ್ಲಿಂಗಗಳಲ್ಲಿ ಪ್ರಮುಖವೂ ಆಗಿರುವ ಸಂಗಮೇಶ್ವರ ಸುಕ್ಷೇತ್ರವು ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನ [ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಗಳು ಸಂಧಿಸುವ ಸ್ಥಳವು ಹೌದು] ನಾರಾಯಣಪುರದ ಬಳಿ ಕೃಷ್ಣ ನದಿಗೆ ಬೃಹದಾಕಾರವಾಗಿ ಕಟ್ಟುತ್ತಿರುವ (ಸಿದ್ಧಾಪುರ, ರಾಯಲ ಬಂಡ) ಅಣೆಕಟ್ಟಿನ ದೆಸೆಯಿಂದಾಗಿ ಮುಳುಗಿ ಹೋಗುವ ದುರ್ದೆಸೆ ಕನ್ನಡಿಗರಾದ ನಮ್ಮ ಕ್ಷಾತ್ರ ತೇಜಸ್ಸಿಗೆ ಒಂದು ಸವಾಲಾಗಿ ಪರಿಣಮಿಸಿದೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಈ ಮೊದಲು ಛಾಯಾಭಗವತಿ ಯೋಜನೆಯಿಂದ ಇಡೀ ಸಂಗಮೇಶ್ವರ ಕ್ಷೇತ್ರವೇ ಮುಳುಗಿಹೋಗುವ ಸಂಭವವಿದ್ದು ಕರ್ನಾಟಕ ಜನತೆಯ ಉಗ್ರ ಪ್ರತಿಭಟನೆಯ ಫಲವಾಗಿ ಆಲಮಟ್ಟಿ-ನಾರಾಯಣಪುರ ಎಂಬ ಎರಡು ಯೋಜನೆಗಳನ್ನಾಗಿ ಮಾಡಲಾಯಿತು. ಈ ಕ್ಷೇತ್ರ ಮುಳಗದಂತೆ ಗೋಡೆಗಳ ನಿರ್ಮಾಣ ಮಾಡಿ ಭೂ ಸಂಪರ್ಕ ಕಲ್ಪಿಸುವ ಏಳು ಕೋಟಿ ರೂಪಾಯಿನ ಬೃಹದಾಕಾರದ ಯೋಜನೆ ಕೈಗೊಳ್ಳುವುದಾಗಿಯೂ ಅಂದಿನ ಲೋಕೋಪಯೋಗಿ ಮಂತ್ರಿಗಳಾಗಿದ್ದ ಶ್ರೀ H. M. ಚೆನ್ನಬಸಪ್ಪನವರು ಶಾಸನ ಸಭೆಗಳಲ್ಲಿ ಭರವಸೆ ಕೊಟ್ಟಿದ್ದೂ ಉಂಟು. ಆದರೆ ಅಣೆಕಟ್ಟೆ ಕೆಲಸ ಭರದಿಂದ ಸಾಗುತ್ತಿರಲು ಈ ಕ್ಷೇತ್ರ ರಕ್ಷಣೆಯ ಕಾರ್ಯ ಏನೇನೂ ನಡೆಯದಿರುವುದು, ಕೇವಲ 20 ಮೈಲಿ ಅಂತರದಲ್ಲಿರುವ ಈ ಅಣೆಕಟ್ಟೆಯಲ್ಲಿ ಮುಂಗಾರು ಕಳೆಯುವ ವೇಳೆಗೆ 60 ಅಡಿ ನೀರು ನಿಲ್ಲುವುದಾಗಿ ತಾಂತ್ರಿಕ ಪರಿಣಿತರಿಂದ (ಇಂಜನಿಯರ್) ನಾನು ಕಳೆದ ತಿಂಗಳು ಅಲ್ಲಿಗೆ ಭೇಟಿ ಕೊಟ್ಟಾಗ ಗೊತ್ತಾಗಿದೆ. ಅಲ್ಲದೆ ಈ ಯೋಜನೆ ಪೂರ್ತಿಯಾದಾಗ [ಬಿ ಡಬ್ಲ್ಯು ಎಲ್ 496.1627 37) ಸಂಘಮೇಶ್ವರ ದೇವಸ್ಥಾನದಲ್ಲಿ 15 ಅಡಿ ನೀರು ನಿಂತು ಹೊಸದಾಗಿ ಕಟ್ಟಿರುವ ವಿಶಾಲ ಛತ್ರ ಮುಳುಗುವಂತೆ ಈಗಾಗಲೇ ಗೋಡೆಗಳ ಮೇಲೆ ಗುರ್ತು ಮಾಡಲಾಗಿದೆ. ಇದರಿಂದಾಗಿ ಈ ಕ್ಷೇತ್ರ ಮುಳುಗಿ ಹೋಗುವುದನ್ನು ಮನಗಂಡ ಸ್ಥಳೀಯ ಜನರು ಭಯಗ್ರಸ್ತರಾಗಿರುವುದನ್ನು ನಾನು ಕಣ್ಣಾರೆ ಕಂಡು ಕೇಳಿರುತ್ತೇನೆ. ಕೃಷ್ಣ, ಮಲಪ್ರಭಾ ನದಿ ಸಂಗಮ ಸ್ಥಾನದಲ್ಲಿರುವ ಬಸವ ಮಂಟಪದ ರಕ್ಷಣೆ, ಕಾಮಗಾರಿ ಮಾತ್ರಾ ನಡೆಯುತ್ತದೆ. 57 ಅಡಿ ಭದ್ರ ತಳಪಾಯ ಹಾಕಿ 60 ಅಡಿ ಎತ್ತರ ಗೋಡೆ ಕಟ್ಟುವ ಕೆಲಸ ಮಾತ್ರಾ ನಡೆಯುತ್ತಿದೆ. ಲೋಕಸಭಾ ಚುನಾವಣೆ ಅನಂತರ ವಿಜಯಿಯಾದ ಶ್ರೀ ವೀರೇಂದ್ರ ಪಾಟೀಲರು ಈ ಕ್ಷೇತ್ರದಲ್ಲಿ ನಡೆದ ಸನ್ಮಾನ ಸಭೆಯಲ್ಲಿ, ಈ ಪವಿತ್ರ ಕ್ಷೇತ್ರದ ರಕ್ಷಣೆಗಾಗಿ ತಮ್ಮ ಶಕ್ತಿ ಮೀರಿ ಶ್ರಮಿಸುವುದಾಗಿ ಭರವಸೆ ಕೊಟ್ಟಿರುವುದುಂಟು ಈಗ ಅವರು ಕೇಂದ್ರದ ಮಂತ್ರಿಯೂ ಆಗಿರುವುದರಿಂದ ಈ ಕ್ಷೇತ್ರ ರಕ್ಷಣೆ ಜವಾಬ್ದಾರಿ ಎಂದಿಗಿಂತ ಇಂದು ಜಾಸ್ತಿಯಾಗಿದೆ. ಈ ಭಾಗದ ನೆಲ ಕರಿಮಣ್ಣಾಗಿರುವುದರಿಂದ ಭದ್ರ ತಳಪಾಯ ಸಿಕ್ಕುವುದು ದುಸ್ತರವಾಗಿದ್ದು ಜಾಗ್ರತೆ ಈ ಕೆಲಸ ಕೈಗೊಳ್ಳದಿದ್ದರೆ ಇಂಜಿನಿಯರುಗಳ ನಿಧಾನ ದ್ರೋಹದಿಂದ ಈ ಕ್ಷೇತ್ರ ಮುಳುಗುವುದಂತು ಖಂಡಿತ. ಈ ಕೊರಗನ್ನೇ ಇಳಕಲ್ಲ ಮಹಂತ ಶಿವಯೋಗಿಗಳವರು ಪ್ರಸ್ತಾಪಿಸಿರುವುದು ಸಮಯೋಚಿತವಾಗಿದೆ. ಈ ಕ್ಷೇತ್ರ ರಕ್ಷಣೆಯ ಜವಾಬ್ದಾರಿ ಹೊತ್ತಿರುವ ಎಲ್ಲರೂ ಕೈ ಕಟ್ಟಿ ಕುಳಿತುಕೊಳ್ಳದೆ ಈ ಸಂದಿಗ್ಧ ಪರಿಸ್ಥಿತಿಯನ್ನು ಒಡ್ಡಿರುವ ಇಂಜನಿಯರುಗಳು ಮತ್ತು ಸರ್ಕಾರದ ವಿರುದ್ಧ ಪ್ರಬಲ ಪ್ರತಿಭಟನೆ ವ್ಯಕ್ತ ಪಡಿಸಬೇಕು. ಈ ಮೂರು ಜಿಲ್ಲೆಯ ಶಾಸಕರು, ಲೋಕ ಸಭಾ ಸದಸ್ಯರುಗಳು ಈ ಕ್ಷೇತ್ರ ಸಂರಕ್ಷಣಾ ಕೆಲಸ ಮುಗಿಯುವ ತನಕ ಅಣೆಕಟ್ಟು ಕೆಲಸ ನಿಲ್ಲುವಂತೆ ತಮ್ಮ ಪ್ರಭಾವ ಬೀರಬೇಕು. ಸಮರಸನ್ನಾಹ ರೀತಿಯಲ್ಲಿ ಶ್ರೀ ಸಂಗಮೇಶ್ವರ ಕ್ಷೇತ್ರ ಸಂರಕ್ಷಣ ಕಾಮಗಾರಿ ನಡೆಸಲು ಸರ್ಕಾರ ದೃಢ ಪ್ರತಿಜ್ಞೆ ಮಾಡಬೇಕು.

—

# ಅಕ್ಕ ಮಹಾದೇವಿ

—ಕೆ. ಚಂದ್ರಶೇಖರಪ್ಪ.

ಮಾನವ ಸಮಾಜದ ಜ್ಞಾನ ವಿಕಾಸಕ್ಕೆ ಪ್ರಗತಿ ಪರರಾದಂತಹ ಮಹಾತ್ಮರ ಜೀವನ ಚರಿತ್ರೆಗಳ ಮನನ ಅತ್ಯವಶ್ಯಕವಾದದ್ದು. ನಮ್ಮ ಇತಿಹಾಸಗಳನ್ನು ಅವಲೋಕಿಸಿದರೆ 12 ನೇ ಶತಮಾನವು ಚಿರಸ್ಮರಣೀಯವಾದ ಕಾಲವೆಂದು ವೇದ್ಯವಾಗುತ್ತದೆ. ಆಗ ಜನ್ಮಿಸಿದ ಮಹಾತ್ಮರುಗಳು ಹೇಳಿದ ಮತ್ತು ಆಚರಿಸಿ ತೋರಿಸಿರುವ ಕೃತಿಗಳು ಅಜರಾಮರಾಗಿ ಬೆಳಗುತ್ತಲಿವೆ. ಇಂತಹ ಬೆಳಗಿದ ಶರಣರಲ್ಲಿ ಭಕ್ತಿ ಭಂಡಾರಿ ಬಸವಣ್ಣನವರು, ಶೂನ್ಯ ಸಿಂಹಾಸನಾಧೀಶ್ವರ ಅಲ್ಲಮಪ್ರಭು, ಚನ್ನಬಸವಣ್ಣ, ಸೊನ್ನಲಿಗೆಯ ಸಿದ್ಧರಾಮೇಶ್ವರ, ಅಂಬಿಗರ ಚೌಡಯ್ಯ, ಹರಳಯ್ಯ, ಮಹಾದೇವಿಯಕ್ಕ, ನೀಲಾಂಬಿಕೆ, ಗಂಗಾಂಬಿಕೆ, ಇನ್ನೂ ಅನೇಕ ಶರಣ ಶರಣೆಯರ ಮಾನವ ಸಮಾಜದ ಉನ್ನತಿಗೆ ಕಾರಣರಾದರು.

ಬಸವಣ್ಣನವರ ವಚನ “ಕೊಲ್ಲುವವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ, ಸಕಲ ಜೀವಾತ್ಮರಿಗೂ ಲೇಸನೆ ಬಗೆಯುವ ಶರಣರೇ ಕುಲಜರು’ ಎಂಬುದರ ಅರ್ಥ ನಮ್ಮ ಶರಣರು ಎಂಟು ನೂರು ವರ್ಷಗಳ ಹಿಂದೆಯೇ ಜಾತಿ ಮತಗಳು ಹುಟ್ಟಿನಿಂದಲ್ಲ, ನಮ್ಮ ನಮ್ಮ ಆಚಾರ ವಿಚಾರಗಳಿಂದ ಬರುವುದು ಎಂಬುದನ್ನು ಎತ್ತಿ ತೋರಿಸಿದ್ದಾರೆ. ಮತ್ತು ಆಚರಣೆಗೆ ತಂದು ಸಹ ತೋರಿಸಿದ್ದಾರೆ. ಈ ರೀತಿ ಆಗಿ ಹೋದಂತಹ ಶರಣ ಶರಣೆಯರಲ್ಲಿ ಅಕ್ಕಮಹಾದೇವಿಯು ಮುಕುಟ ಪ್ರಾಯಳಾದವಳು.

ಅಕ್ಕಮಹಾದೇವಿಯು ಹುಟ್ಟಿದುದು ಹಿಂದೆ ಬನವಸೆಯ ನಾಡೆಂದು ಪ್ರಖ್ಯಾತವಾಗಿದ್ದ ಶಿವಮೊಗ್ಗೆ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಉಡುತಡಿಯಲ್ಲಿ. ಈಗ ಇದು ಹೋಬಳಿ ಮುಖ್ಯ ಸ್ಥಳವಾಗಿದೆ. ಈ ಪ್ರಾಂತ್ಯವು ಅನೇಕ ಶರಣ ಶರಣೆಯರು ಹುಟ್ಟಿ ಬಾಳಿ ಬೆಳಗಿದ ಪುಣ್ಯಭೂಮಿಯಾಗಿದೆ. ಉಡುತಡಿಗೆ ಸಮೀಪದಲ್ಲಿರುವ ಬಳ್ಳಿಗಾವಿಯು ಅಲ್ಲಮಪ್ರಭುವಿನ ಜನ್ಮಸ್ಥಳವಾಗಿದೆ. ಅಲ್ಲಮ ಪ್ರಭುವಿನ ಆಧ್ಯಾತ್ಮ ಗುರುವಾದ ಅನಿಮಿಷಾರಣ್ಯರು ಅನುಷ್ಠಾನ ಮಾಡಿದ ಅನಿಮಿಷಾರಣ್ಯ, ಸತ್ಯಕ್ಕನ ಹಿರೇಜಂಬೂರು, ಅಜಗಣ್ಣ ಮುಕ್ತಾಯಕ್ಕನವರ ಮುತ್ತಿಗೆ, ಇಕ್ಕದ ಮಾರಯ್ಯನ ಶಿವನಪಾದ, ಅಲ್ಲಮ ಪ್ರಭು ಮತ್ತು ಮಾಯಾದೇವಿಯವರ ಸಂವಾದ ನಡೆದಂತಹ ಬಂದಳಿಕೆ, ಇನ್ನೂ ಅನೇಕ ಶರಣ ಶರಣೆಯರು ಹುಟ್ಟಿ, ಬಾಳಿ ಬೆಳೆಗಿದ ಈ ನಾಡು ಪುಣ್ಯಕ್ಷೇತ್ರವಾಗಿದೆ. ಅಕ್ಕಮಹಾದೇವಿಯು ಉಡುತಡಿಯಲ್ಲಿ ನಿರ್ಮಲಶೆಟ್ಟಿ ಮತ್ತು ಸುಜ್ಞಾನದೇವಿಯರ ಪವಿತ್ರ ಉದರದಲ್ಲಿ ಜನಿಸಿ ಚಿಕ್ಕಂದಿನಲ್ಲಿಯೇ ಅಕೆಯುಳ್ಳಿದ್ದ ಭಕ್ತಿ ಭಾವಗಳನ್ನು ತೋರಿಸಿ, ಮಲ್ಲಿಕಾರ್ಜುನನೇ ತನ್ನ ಪತಿಯೆಂದು ನಂಬಿ ಜಗತ್ತಿಗೆ ತನ್ನ ಪ್ರತಿಭೆಯನ್ನು ತೋರಿಸಿಕೊಟ್ಟ ಮಹಾ ಶಿವಶರಣೆ. ಈಕೆಯು ಆರಾಧ್ಯ ದೈವವಾದ ಮಲ್ಲಿಕಾರ್ಜುನ ದೇವಾಲಯವು ಈಗಲೂ ಪರದೇಶಿ ಮಲ್ಲಿಕಾರ್ಜುನವೆಂದು ವಿರಾಜಿಸುತ್ತಲಿದೆ. ಈಕೆಯ ವಚನಗಳ ಮಟ್ಟ ಎಷ್ಟಿತ್ತೆಂಬುದು ಈ ಕೆಳಗಿನ ವಚನದಿಂದ ವೇದ್ಯವಾಗುತ್ತದೆ. ಆದ್ಯರ ಅರುವತ್ತು ವಚನಗಳಿಗೆ ದಣ್ಣಾಯಕರ ಇಪ್ಪತ್ತು ವಚನ ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕನ ಒಂದು ವಚನ, ನಿರ್ವಚನ ಕಾಣಾ ಸಿದ್ಧರಾಮಯ್ಯ ಈ ರೀತಿ ಅಕ್ಕನ ವಚನ ಸಾರವು ವಚನ ಸಾಹಿತ್ಯದಲ್ಲಿ ಮುಕುಟಪ್ರಾಯವಾಗಿದೆ.

12ನೇ ಶತಮಾನದಲ್ಲಿ ಉಡುತಡಿ ರಾಜ್ಯದ ಅರಸನಾದ ಕೌಶಿಕನ ಕಾಮ ದೃಷ್ಟಿಯು ಅಕ್ಕಮಹಾ

ದೇವಿಯ ಮೇಲೆ ಬಿದ್ದಿತು. ಆತನ ಕಾಮುಕತನಕ್ಕೆ ಬಲಿಯಾಗದೇ ವೈರಾಗ್ಯ ತಾಳಿ ಉಡುತಡಿಯನ್ನು ಬಿಟ್ಟು ಹೋದ ಅಕ್ಕಮಹಾದೇವಿಯು ಶರಣರ ಸ್ಥಳವಾದ ಕಲ್ಯಾಣಕ್ಕೆ ತೆರಳಿ ಅಲ್ಲಿ ಅನುಭವ ಮಂಟಪದಲ್ಲಿ ಅಲ್ಲಮ ಪ್ರಭುವಿನ ಕಠಿಣ ಪರೀಕ್ಷೆಗೆ ಒಳಗಾಗಿ, ಎಲ್ಲ ಶರಣ ಶರಣರಿಂದಲೂ ಭಲೆ ಎನ್ನಿಸಿಕೊಂಡು, ನಂತರ ತನ್ನ ಆರಾಧ್ಯ ದೈವವಾದ ಮತ್ತು ಪತಿಯಾದ ಶ್ರೀ ಶೈಲ ಚನ್ನಮಲ್ಲಿಕಾರ್ಜುನನಲ್ಲಿಗೆ ತೆರಳಿ ಅಲ್ಲಿ ಬಯಲಾದಳು.

ಈಕೆಯ ಈ ಕೆಳಗಿನ ವಚನದಿಂದ ಮಾಯೆಯ ಬಗ್ಗೆ ಆಕೆಯ ಅರಿವು ಏನೆಂಬುದು ವ್ಯಕ್ತವಾಗುತ್ತದೆ. ಪುರುಷನ ಮುಂದೆ ಮಾಯೆ ಸ್ತ್ರೀಯಾಗಿ ಸ್ತ್ರೀಯ ಮುಂದೆ ಮಾಯೆ ಪುರುಷನಾಗಿ ಕಾಡಿತ್ತು ನೋಡಾ, ಲೋಕವೆಂಬ ಮಾಯೆಗೆ ಶರಣ ಚಾರಿತ್ರ್ಯ ಮರುಳಾಗಿ ತೋರುವುದು ನೋಡಾ, ಚನ್ನಮಲ್ಲಿಕಾರ್ಜುನನೊಲಿದ ಶರಣರಿಗೆ ಮಾಯೆಯಿಲ್ಲ." "ಕಾಯಕ್ಕೆ ನೆರಳಾಗಿ, ಪ್ರಾಣಕ್ಕೆ ಮನವಾಗಿ, ಮನಸಿಂಗೆ ನೆನಹಾಗಿ, ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜನದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ........"

ಅಕ್ಕನು ಮನೆಯಿಂದ ಹೊರಡುವಾಗ ಹೇಳಿದ ವಚನ "ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನವ್ವ, ಎಡೆಯಿಲ್ಲದ ಕಡೆಯಿಲ್ಲದ ತೆರೆಹಿಲ್ಲದ ಕುರುಹಿಲ್ಲದ ಚಲುವಂಗೆ, ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ, ನಾನು ಕುಲುಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆನವ್ವ ಇದು ಕಾರಣ ಚನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ, ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು...' ಇದು ಆಕೆಯಲ್ಲಿದ್ದ ಲಿಂಗಾಭಿಮಾನದ ದ್ಯೋತಕವಾಗಿದೆ.

ಇಂತಹ ಶರಣ ಶರಣೆಯರ ಜೀವನ ಚರಿತ್ರೆಯನ್ನು ಅರಿತು ಅವರ ಆದರ್ಶವನ್ನು ಅನುಕರಿಸುವುದು ನಮ್ಮಗಳ ಕರ್ತವ್ಯವಾಗಿದೆ. ಹಾಗೆ ಮಾಡಿದಲ್ಲಿ ನಮ್ಮ ಜೀವನವನ್ನು ಸಾರ್ಥಕ ಮಾಡಿಕೊಂಡಂತಾಗುತ್ತದೆ. ಈಗಿನವರು ಹೇಳುತ್ತಿರುವ ದುಡಿದು ಉಣಬೇಕೆಂಬುದನ್ನು 800 ವರ್ಷಗಳ ಹಿಂದೆಯೇ ಬಸವಣ್ಣನವರು "ಕಾಯಕವೇ ಕೈಲಾಸ" ವೆಂದು ಹೇಳಿ ಪ್ರತಿಯೊಬ್ಬರೂ ತಮ್ಮ ತಮ್ಮ ಕಾರ್ಯವನ್ನು ಮಾಡಿಯೇ ಪ್ರಸಾದ ಸೇವಿಸಬೇಕೆಂದು ಹೇಳಿದರು. ಅದೇ ರೀತಿ ಆಚರಿಸಿ ಶರಣರು ತೋರಿಸಿದ್ದಾರೆ. ಇದರ ಅರ್ಥವನ್ನು ತಿಳಿದು ನಾವೂ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ.

ಇಂತಹ ಶರಣೆಯ ಜನ್ಮ ಸ್ಥಳದಲ್ಲಿ ಆಕೆಯ ನೆನಹಿಗಾಗಿ ಇದುವರೆವಿಗೂ ಯಾವ ಸ್ಮಾರಕವೂ ಇಲ್ಲದಿರುವುದನ್ನು ಗಮನಿಸಿ ಶಿರಾಳಕೊಪ್ಪದ ವಿರಕ್ತ ಮಠ ಮತ್ತು ಬೆಂಗಳೂರು ಸರ್ಪಭೂಷಣ ಮಠಾಧ್ಯಕ್ಷರಾದ ವೇದಾಂತಾಚಾರ್ಯ ಶ್ರೀ ಶಿವಕುಮಾರ ಸ್ವಾಮಿಗಳು ಇವರ ದಿವ್ಯ ನೇತೃತ್ವದಲ್ಲಿ ಈ ಭಾಗದ ಜನರು ಅಕ್ಕಮಹಾದೇವಿ ಸಮಿತಿಯ ವತಿಯಿಂದ ಉಡುತಡಿಯಲ್ಲಿನ ಅಕ್ಕಮಹಾದೇವಿಯ ಜನ್ಮ ಸ್ಥಳವಾದ ಕೋಟೆಯ ಪ್ರದೇಶವನ್ನು ಘನ ಸರ್ಕಾರದಿಂದ ಪಡೆದು, ಅಲ್ಲಿ ಒಂದು ಸುಂದರ ಮಂದಿರವನ್ನು ನಿರ್ಮಿಸಿರುತ್ತಾರೆ. ಮತ್ತು ಅಕ್ಕಮಹಾದೇವಿಯ ಅಮೃತ ಶಿಲಾ ಮೂರ್ತಿಯನ್ನು ಸಹ ಕಳೆದ 17-4-73 ರಂದು ಪ್ರತಿಷ್ಠಾಪನೆ ಮಾಡಿರುತ್ತಾರೆ. ಈ ಸಮಾರಂಭಕ್ಕೆ ಧಾರವಾಡದ ಮುರುಘಾಮಠಾಧ್ಯಕ್ಷರಾದ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಮಹಾಂತಪ್ಪಗಳವರು, ಸಿದ್ಧಗಂಗಾ ಮಠಾಧೀಶರಾದ ಶ್ರೀ ಶಿವಕುಮಾರ ಸ್ವಾಮಿಗಳು, ಮೂಡಿ, ಜಡೆ ಶ್ರೀಗಳವರು, ಡಾ॥ ಜ॥ ಚ॥ ನಿ॥ ಯವರೂ ಇನ್ನೂ ಅನೇಕ ಹರ ಗುರು ಚರಮೂರ್ತಿಗಳು ದಯಮಾಡಿಸಿದ್ದರು. ಶ್ರೀಯುತ ಎಸ್. ಎಂ. ಕೆ. ಸೋಗಿ, ಶ್ರೀ ನಾಗಭೂಷಣ ಶಾಸ್ತ್ರಿಗಳು, ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ ಮತ್ತು ಜಗದಾಂಬ ಮಲ್ಲೇದೇವರು ಸಹ ದಯಮಾಡಿಸಿ ಸಮಾರಂಭದಲ್ಲಿ ಜ್ಞಾನ ದಾಸೋಹವನ್ನು ನೀಡಿ ಜನತೆಯನ್ನು ಪುನೀತಗೊಳಿಸಿದರು.

ಈ ಸ್ಥಳದಲ್ಲಿ ಅಕ್ಕಮಹಾದೇವಿ ಸಮಿತಿಯವರು ಒಂದು ಮಹಿಳಾ ವಿದ್ಯಾಪೀಠವನ್ನು ಸ್ಥಾಪಿಸುವ ಯೋಜನೆಯನ್ನು ಇಟ್ಟುಕೊಂಡಿರುತ್ತಾರೆ. ಈ ಕಾರ್ಯವು ಮಹಾಜನಗಳ ತನು, ಮನ, ಧನಗಳ ಸಹಕಾರದಿಂದ ನಡೆಯಬೇಕಾಗಿದೆ.

—

# ನೇಣು ಬಿದ್ದೂ ಸಾಯದವರು !

—ಪ. ರಾಮಕೃಷ್ಣ ಶಾಸ್ತ್ರಿ.

### ಆನಿಗ್ರೀನ್

ಆಕ್ಸ್‌ಫರ್ಡಿನ ಸಮೀಪದ ಹಳ್ಳಿಯೊಂದರ ವಿಖ್ಯಾತ ಜಮೀನ್ದಾರನಾಗಿದ್ದ ಸರ್ ಥಾಮಸ್ ರೀಡನ ಮನೆಗೆ ಸುಂದರಿಯಾದ ಆನಿಗ್ರೀನ್ ಎಂಬ ಹುಡುಗಿ ಕೆಲಸಕ್ಕೆ ಬಂದು ಸೇರಿದಳು. ಆದರೆ ಕಾಮುಕನಾದ ರೀಡನ ಮಗ ಅವಳ ಶೀಲಭಂಗ ಮಾಡಿದ. ಕೆಲವು ದಿನಗಳಲ್ಲಿ ಅವರ ಮನೆಯ ಪಕ್ಕದಲ್ಲಿ ಎಳೆಯ ಮಗುವೊಂದರ ಮೃತದೇಹ ಸಿಕ್ಕಿತು. ಆದು ಕನ್ಯೆಯಾದ ಆನಿ ತಾಯಿಯಾಗಿ, ತನ್ನ ಮಗುವನ್ನೇ ಕೊಂದು ಹಾಕಿದ್ದುದೆಂದು ಸುದ್ದಿ ಹಬ್ಬಿತು. ಪೋಲೀಸರು ಆನಿಯನ್ನು ಬಂಧಿಸಿದರು. ಈ ತಪ್ಪಿಗಾಗಿ ನ್ಯಾಯಾಲಯದಲ್ಲಿ ಆನಿಗ್ರೀನ್‌ಗೆ ಗಲ್ಲಿನ ಶಿಕ್ಷೆ ವಿಧಿಸಲ್ಪಟ್ಟಿತು. ಅವಳಿಗೆ ಶಿಕ್ಷೆ ವಿಧಿಸಿದ ನ್ಯಾಯಾಧೀಶ ಬೇರಾರೂ ಅಲ್ಲ, ಅವಳನ್ನು ಶೀಲಭ್ರಷ್ಟಗೊಳಿಸಿದವನ ತಂದೆ ಸರ್ ಥಾಮಸ್ ರೀಡ್. ಈ ಘಟನೆ ನಡೆದುದು ೧೬೫೦ ರಲ್ಲಿ.

ಆನಿಯನ್ನು ಕೈ ಗಾಡಿಯಲ್ಲಿ ಕೂಡಿಸಿ, ಗಲ್ಲುಗಂಬದ ಬಳಿಗೆ ಕರೆದೊಯ್ದರು. ಕುತ್ತಿಗೆಗೆ ನೇಣು ಹಾಕಿ, ಗಾಡಿಯನ್ನು ಜಾರಿಸಿದರು. ದೇಹ ಕ್ಷಣ ಕಾಲ ಒದ್ದಾಡಿ ನಿಶ್ಚೇಷ್ಟಿತವಾಯಿತು. ಕುಟುಕು ಜೀವ ಉಳಿದಿದ್ದರೆ ಆದೂ ಹೋಗಲೆಂದು ಕೆಲವರು ಅವಳ ಕಾಲು ಹಿಡಿದು ನೇತಾಡಿದರು.

ಅರ್ಧ ಗಂಟೆಯ ಬಳಿಕ ಆನಿಯ ತಾಯಿ ಅವಳ ದೇಹವನ್ನು ಮನೆಗೆ ಸಂಸ್ಕಾರಕ್ಕಾಗಿ ಒಯಿದಾಗ ದೇಹದಲ್ಲಿ ಇನ್ನೂ ಜೀವವಿರುವಂತೆ ಎನಿಸಿತು. ವೈದ್ಯರನ್ನು ಕರೆಯಿಸಿ, ಚಿಕಿತ್ಸೆಗಳನ್ನು ನಡೆಸಿದರು ಒಂದೆರಡು ದಿನಗಳಲ್ಲಿ ಆಕೆ ಪೂರ್ಣ ಆರೋಗ್ಯವಂತಳಾದಳು.

ಆನಿಯ ತಂದೆ ಮಗಳನ್ನು “ನೇಣಿನಿಂದ ಬದುಕಿದವಳು” ಎಂದು ಪ್ರಚಾರ ಮಾಡಿ, ಪ್ರದರ್ಶನಕ್ಕಿಟ್ಟು ಪ್ರವೇಶ ಶುಲ್ಕವನ್ನು ವಿಧಿಸಿದ. ಕಾನೂನು ಪ್ರಕಾರ ಆನಿಯನ್ನು ಸಾಯುವ ವರೆಗೆ ಗಲ್ಲಿಗೇರಿಸಬಹುದಿತ್ತಾದರೂ ಅವಳು ನಿರ್ದೋಷಿಯೆಂಬ ಕಟುಸತ್ಯ ಬೆಳಕಿಗೆ ಬಂತು. ಆಕೆಯ ಶೀಲಭಂಗವಾಗಿದ್ದರೂ ಅವಳು ಗರ್ಭ ತಾಳಿರಲಿಲ್ಲವೆಂದೂ ಮನೆಯ ಪಕ್ಕದಲ್ಲಿ ದೊರಕಿದ ಮಗುವಿನ ಮೃತದೇಹ ಯಾರದೋ ನಾಲ್ಕು ತಿಂಗಳ ಗರ್ಭಸ್ರಾವದ್ದೆಂದೂ ವೈದ್ಯ ಪರೀಕ್ಷೆಯಿಂದ ಸ್ಥಿರಪಟ್ಟಿತು.

ಪೊಲೀಸ್ ದಾಖಲೆ ಪ್ರಕಾರ ಗಲ್ಲಿಗೇರಿದವರು ಐದು ನಿಮಿಷದೊಳಗೆ ಸಾಯುತ್ತಾರೆ. ಆದರೆ ಅರ್ಧ ತಾಸಿನಲ್ಲೂ ಆನಿ ಸಾಯದಿದ್ದುದು ವಿಚಿತ್ರ. ಆಕೆ ಮದುವೆಯಾಗಿ ಸುಖಜೀವನ ನಡೆಸುತ್ತಿದ್ದಳೆಂದು ಡಾ॥ ಡರ್‌ಹಾಮ್ ಬರೆದಿಟ್ಟಿದ್ದ. ವಿಚಿತ್ರವೆಂದರೆ ಆಕೆ ನಿರ್ದೋಷಿಯೆಂದು ತಿಳಿದ ಕೂಡಲೇ ಸರ್ ಥಾಮಸ್ ರೀಡ್ ಹೃದಯಾಘಾತದಿಂದ ಸತ್ತೇ ಹೋದನಂತೆ.

### ಜಾನ್ ಲೀ

ಇಂಗ್ಲೆಂಡಿನ ಡೇವನ್ ಶೈರಿನ್ ಹಳ್ಳಿಯೊಂದರಲ್ಲಿ ಮಿಸ್ ಎಮ್ಮೊಆನಿ ವೈಟ್‌ಫೀಲ್ಡ್ ಕೇಯಿಸ್ ಎಂಬ ಹೆಂಗಸು. ಆಕೆ ಕ್ರೂರಿ. ಕೆಲಸದಾಳುಗಳನ್ನು ತೀರ ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದಳು. ೧೮೮೪ ರ ನವೆಂಬರ್ ತಿಂಗಳಲ್ಲಿ ಅವಳು ತನ್ನ ಕೋಣೆಯಲ್ಲಿ

ಕೊಲೆಯಾಗಿ ಬಿದ್ದಿದ್ದಳು. ಅವಳ ಮೈಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಲಾಗಿತ್ತು.

ಪಕ್ಕದ ಕೋಣೆಯಲ್ಲಿ ಮಲಗಿದ್ದ ಜಾನ್‌ಲೀ ಎಂಬ ಕೆಲಸದವನನ್ನು ಬಂಧಿಸಿದರು. ತಾನು ನಿರಪರಾಧಿಯೆಂದು ಅವನೆಷ್ಟೇ ಸಾರಿದರೂ ಅವನಿಗೆ ಮರಣ ದಂಡನೆ ವಿಧಿಸಿದರು. ೧೮೮೫ ರ ಫೆಬ್ರವರಿ ೨೩ ರಂದು ಅವನ ಕೈಗಳನ್ನು ಹಿಂದಕ್ಕೆ ಕಟ್ಟಿ, ನೇಣು ಹಾಕುವ ಕಬ್ಬಿಣದ ಬೋನಿನೊಳಗೆ ಅವನನ್ನು ತಳ್ಳಿದರು. ಅವನ ಕುತ್ತಿಗೆಗೆ ನೇಣಿನ ಕುಣಿಕೆ ಬಿಗಿದು, ಕಾಲಿನ ಕೆಳಗಿದ್ದ ಕಬ್ಬಿಣದ ಹಲಗೆಯನ್ನು ಸರಿಸಲೆತ್ನಿಸಿದರು. ಆದರೆ ಸುತರಾಂ ಆ ಹಲಗೆ ಸರಿಯಲಿಲ್ಲ.

ಜಾನ್‌ಲೀಯ ಕೊರಳ ಕುಣಿಕೆ ತೆಗೆದು ದೂರ ನಿಲ್ಲಿಸಿ, ಹಲಗೆಯನ್ನೆಳೆದಾಗ ಸರಿಯಾಗಿ ಸರಿದಾಡಿತು. ಆದರೆ ಅವನನ್ನು ಅದರಲ್ಲಿ ನಿಲ್ಲಿಸಿದ ಒಡನೆ ಏನು ಮಾಡಿದರೂ ಸರಿಯಲಿಲ್ಲ. ಹೀಗೆ ಮೂರು ಸಲ ಪ್ರಯತ್ನಿಸಿದರೂ ಅವರ ಯತ್ನ ವಿಫಲವಾಯಿತು.

ಜಾನ್ ಲೀ ನಿಜವಾಗಿಯು ನಿರಪರಾಧಿಯೆಂದು ಅವನ ಸಾವನ್ನು ದೇವರೇ ತಡೆಯುತ್ತಿದ್ದಾನೆಂದೂ ನೆರೆದ ಜನ ಪ್ರತಿಭಟಿಸಿದರು. ಕೂಡಲೇ ನ್ಯಾಯಾಧಿಕಾರಿಗಳು ಅವನ ಗಲ್ಲು ಶಿಕ್ಷೆಯನ್ನು ರದ್ದುಪಡಿಸದರೂ ಜೀವಾವಧಿ ಶಿಕ್ಷೆ ವಿಧಿಸಿದರು. ಬ್ರಿಟೀಷ್ ಅಪರಾಧ ದಾಖಲೆಯಲ್ಲೇ ಇದು ವಿಚಿತ್ರ ವೃತ್ತಾಂತ.

**ಜಾನ್ ನ್ಯಾನ್ಸ್ ರ್‍ಯಾನ್**

ಬ್ರಿಟೀಷ್ ಅಪರಾಧ ಚರಿತ್ರೆಯಲ್ಲೇ ಇನ್ನೊಂದು ವಿಚಿತ್ರ ಪ್ರಸಂಗವೆಂದರೆ, ಜಾನ್ ನ್ಯಾನ್ಸ್ ರಾನ್‌ನದು.

೧೮೬೮ ರ ಜನವರಿ ೩ ರಂದು ಐರ್ಲೆಂಡಿನ ಕುಂಬರ್ ಪೂಡ್ಸ್‌ನಲ್ಲಿ ಆತ ಕುಡಿದು ಅಮಲೇರಿ ಬಿದ್ದಿದ್ದ. ಅವನ ಪಕ್ಕದಲ್ಲಿ ಮಲಗಿದ್ದ ಅವನ ಪ್ರೇಯಸಿ ನ್ಯಾನ್ಸಿ ಗ್ಲೇನ್ ಕೊಲೆಯಾಗಿದ್ದಳು. "ಅವಳ ಕೊಲೆಯ ವಿಚಾರ ನಾನರಿಯೇ; ನಾನು ನಿರಪರಾಧಿ" ಎಂದು ಜಾನ್ ಎಷ್ಟೇ ಸಾರಿದರೂ ಅವನ ಬಂಧನವಾಯಿತು. ನ್ಯಾಯಾಲಯ ಅವನಿಗೆ ಫಾಶಿ ಶಿಕ್ಷೆಯನ್ನು ವಿಧಿಸಿತು.

ಫೆಬ್ರವರಿ ೧೧ ರಂದು ಬೆಳಿಗ್ಗೆ ಗಲ್ಲು ಗಂಬದ ಬಳಿಗೆ ಜಾನ್‌ನನ್ನು ಕರೆದೊಯ್ದು, ಕುತ್ತಿಗೆಗೆ ಹಗ್ಗದ ಉರುಲು ಹಾಕಿದರು. ಮುಖಕ್ಕೆ ಶವ ವಸ್ತ್ರವನ್ನು ತೊಡಿಸಿ, ಕಾಲ ಕೆಳಗಿನ ಹಲಗೆಯನ್ನು ಸರಿಸಿದರು. ಕುತ್ತಿಗೆ ಜಗ್ಗಿತು. ಅಸಾಧಾರಣ ವೇದನೆಯಿಂದ ತಳಮಳಗೊಂಡ ಜಾನ್‌ನಿಗೆ ಕಣ್ಣುಕತ್ತಲೆ ಬಂದಂತಾಯಿತು. ನೇಣು ತೊಡಿಸುವವರು ಹೊರಟುಹೋದರು.

ಎಷ್ಟೋ ಹೊತ್ತಿನ ಮೇಲೆ ಜಾನ್‌ಗೆ ಎಚ್ಚರವಾದಾಗ ತಾನಿನ್ನೂ ಸತ್ತಿಲ್ಲವೆಂದು ಅವನಿಗೆ ಅಚ್ಚರಿ. ಕುತ್ತಿಗೆಯ ಹಗ್ಗ ಹಾಗೇ ಇತ್ತು. ಕಾಲು ನೇತಾಡುತ್ತಿತ್ತು. ಸಂಜೆ ಶವ ಹೂಳುವವ ಹೊಂಡ ತೆಗೆದು, ಜಾನ್‌ನ ಮುಸುಕು ಸರಿಸಿದಾಗ ಇದೇನು ಭೂತವೋ ಎಂದು ಹೌಹಾರಿದ. ಮೃತನಾಗಿರಬೇಕಾಗಿದ್ದ ರ್‍ಯಾನ್ ಪಿಳಿ ಪಿಳಿ ಕಣ್ಣು ಬಿಡುತ್ತಿದ್ದ.

ಶವ ಹೊಳುವವನಿಗೆ ಈ ಅಪರಾಧಿಯ ಮೇಲೆ ಕರುಣೆಯುಕ್ಕಿತು. ಅವನು ಜಾನ್ ನ್ಯಾನ್ಸ್ ರ್‍ಯಾನ್‌ನಿಗೆ ತನ್ನ ಉಡುಪುಗಳನ್ನು ಕೊಟ್ಟು ಅವನನ್ನು ಆಸ್ಟ್ರೇಲಿಯಾಕ್ಕೆ ರವಾನಿಸಿಬಿಟ್ಟ. ಆತನನ್ನು ಹೂಳಬೇಕಾದ ಗೋರಿಯ ಮಣ್ಣ ಮುಚ್ಚಿ, ಅದರ ಮೇಲೆ ಅಪರಾಧಿಯನ್ನು ಹೂಳಿದ ತಾರೀಖು ಮತ್ತು ನಂಬರ್ ಬರೆದ.

೩೨ ವರುಷಗಳಲ್ಲಿ ಜಾನ್ ನ್ಯಾನ್ಸ್ ಐರ್ಲೆಂಡಿಗೆ ಹಿಂತಿರುಗಿ ಬಂದು, ಡಬ್ಲಿನ್‌ನ ಆರ್ಚಬಿಷಪರಲ್ಲಿಗೆ ಹೋಗಿ, ತಾನು ನಿರಪರಾಧಿಯೆಂದು ನಿವೇದಿಸಿ, ತನ್ನನ್ನು ಗಲ್ಲಿಗೇರಿಸಿದ ವಿಫಲ ಕಥೆಯನ್ನು ಅರುಹಿದ. ರ್‍ಯಾನ್ ನಿರ್ದೋಷಿಯೆಂದು ಆರ್ಚಬಿಷಪರು ವಿಕ್ಟೋರಿಯಾ ಮಹಾರಾಣಿಗೆ ಪತ್ರವೊಂದನ್ನು ಬರೆದರು. ರಾಣಿ ರ್‍ಯಾನ್‌ನನ್ನು ಕ್ಷಮಿಸಿದಳು.

**ಆತ್ಮಾಸಿಂಹ ಗ್ರಂಥಿ**

ಶಾಂಘಾಯಿಯ ಬ್ರಿಟೀಷ್ ಪೋಲಿಸ್ ಕಚೇರಿಯಲ್ಲಿ ಒಂದು ಸಣ್ಣ ಅಪರಾಧಕ್ಕಾಗಿ ಆತ್ಮಾಸಿಂಹಗ್ರಂಥಿ

ಯೆಂಬ ಪಂಜಾಬಿಯನ್ನು ತಂದಿಡಲಾಗಿತ್ತು. ಅವನು ಒಂದೆರಡು ದಿನದಲ್ಲಿ ಬಾವಾಸಿಂಹನೆಂಬ ಸಿಪಾಯಿಯನ್ನು ಜೈಲಿನ ಬಾತ್ ರೂಮಿನೊಳಗೆ ಕೊಡಲಿಯಿಂದ ಕೊಚ್ಚಿ ಕೊಚ್ಚಿ ಅರ್ಧ ದೇಹ ಡಬ್ಬಿಯೊಳಗೆ ಇನ್ನರ್ಧ ದೇಹ ಹೊರಗೆ ಹಾಕಿದ್ದ.

ಆತ್ಮಾಸಿಂಹ ತನ್ನ ಅಪರಾಧವನ್ನು ಒಪ್ಪಿಕೊಂಡ. ಅವನನ್ನು ಬಂಧಿಸಿ ಜೈಲಿಗೆ ಹಾಕಿದವ ಬಾವಾಸಿಂಹ. ಮಾತ್ರವಲ್ಲ, ಆತ್ಮಾಸಿಂಹನ ಸುಂದರಿ ತರುಣಿ ಹೆಂಡತಿಯನ್ನು ಬಲಿಗೆ ಹಾಕಿಕೊಳ್ಳಲು ಹೋದ. ಆದರೆ ಅವಳು ಅವನ ವಶಳಾಗದ್ದರಿಂದ ಆತ್ಮಾಸಿಂಹನ ಬಳಿಗೆ ಬಂದು ಆತನ ಹೆಂಡತಿ ಯಾರ್ಯಾರೊಂದಿಗೋ ಬೆನ್ನು ಹತ್ತಿರುವುದಾಗಿ ಹೇಳಿದ. ತನ್ನ ಹೆಂಡತಿ ನಿರ್ದೋಷಿಯೆಂದು ಸ್ಥಿರ ಪಡಿಸಲು ಆತ್ಮಾಸಿಂಹ ಬಾವಾಸಿಂಹನ ಖೂನಿ ಮಾಡಿದ

ಆತ್ಮಾಸಿಂಹನಿಗೆ ಗಲ್ಲಿನ ಶಿಕ್ಷೆ ಸ್ಥಿರವಾಯಿತು. ಶಾಂಘಯಿಯಲ್ಲಿ ನೇಣು ಬಿಗಿಯುವ ವ್ಯಕ್ತಿಗಳಾರೂ ಇಲ್ಲದಿದ್ದರಿಂದ ಒಬ್ಬನನ್ನು ಹಾಂಕಾಂಗಿನಿಂದ ತರಿಸಿದರು.

ನೇಣು ಹಾಕಿದರು. ಆದರೆ ಆತ್ಮಾಸಿಂಹನ ತೂಗಾಡಲಿಲ್ಲ. ಅರ್ಧ ಮಿನಿಟನಲ್ಲಿ ನೇಣಿನ ಹಗ್ಗ ತುಂಡಾಗಿ ಕೆಳಗೆ ಬಿದ್ದ. ಹಗ್ಗವನ್ನು ತಜ್ಞರ ಪರೀಕ್ಷೆಗೆ ಕಳುಹಿಸಿದಾಗ ಹೊಸದಾದ ಆ ಹಗ್ಗ ಹೇಗೆ ತುಂಡಾಯಿತೆಂದು ಗೊತ್ತಾಗಲಿಲ್ಲ.

ಆತ್ಮಾಸಿಂಹನಿಗೆ ಸಾಯುವವರೆಗೂ ನೇಣು ಹಾಕಬೇಕೆಂದು ಶಿಕ್ಷೆ ವಿಧಿಸಲ್ಪಟ್ಟಿದ್ದರೂ ಪುನಃ ಅವನನ್ನು ಗಲ್ಲಿಗೇರಿಸಲು ಸಿಖ್ಖರು ಒಪ್ಪಲಿಲ್ಲ. ಖಟ್ಲೆ ನಡೆದು, ಕೊನೆಗೆ ಅವನ ಫಾಶಿ ಶಿಕ್ಷೆಯನ್ನು ಆಜೀವ ಕಾರಾಗೃಹ ವಾಸಕ್ಕೆ ಇಳಿಸಿದರು. —

# ತಕ್ಕ ವೇಳೆಯಲ್ಲಿ............

—ಬಿ. ಸುಬ್ರಾಯ ಅಡಿಗ.

ಆಯಕಟ್ಟಿನ ವೇಳೆಯಲ್ಲಿ ದಾರಿತೋರಿಸುವುದೇ ನಿಜವಾದ ಬುದ್ಧಿ, ಜಾಣ್ಮೆ ಹಾಗೂ ಪ್ರತಿಭೆ. ಬೆನ್ನ ಮೇಲೆ ಭಾರ ಹೊತ್ತು ತಲೆತಗ್ಗಿಸಿ ಸಾಗುವ ಕತ್ತೆಯಲ್ಲೂ ಬುದ್ಧಿಯಿದೆ, ನಿಜ. ಆದರೆ ಅಂತಹ ಸಾಮಾನ್ಯ ಬುದ್ಧಿಯ ಬಗ್ಗೆ ನಾನೆನ್ನುತ್ತಿಲ್ಲ. ನಾನು ಹೇಳುತ್ತಿರುವ ಅಸಾಧಾರಣ ಬುದ್ಧಿ ಎಲ್ಲರಲ್ಲೂ ಬರಲಾರದು. ಸುದೀರ್ಘ ಸಾಧನೆಯ ಬಳಿಕವೇ ಬುದ್ಧಿಯಲ್ಲಿ ಅಂತಹ ಚಮತ್ಕಾರ ಹಾಗೂ ತೀಕ್ಷ್ಣತೆ ಉಂಟಾಗಬಲ್ಲುದು. ಮನುಷ್ಯ ಒಂದೇ ಹಾರಿಕೆಯಲ್ಲಿ ಬೆಟ್ಟವನ್ನು ದಾಟ ಬಿಡುತ್ತಾನೆ, ಒಂದೇ ಓಟಕ್ಕೆ ಮರುಭೂಮಿಯಾಚೆ ತಲುಪುತ್ತಾನೆ. ಹಾಗೆಯೇ ಒಂದೇ ಜಿಗಿತಕ್ಕೆ ಸಮುದ್ರದ ಮತ್ತೊಂದು ದಡ ಸೇರುತ್ತಾನೆ! ಈ ಎಲ್ಲ ಸಾಹಸಕೃತ್ಯಗಳನ್ನು ಸಾಮಾನ್ಯ ಜನರು ಬಿಡುಗಣ್ಣರಾಗಿ ನೋಡುತ್ತಾರೆ. ಅವರು ಅಪಘಾತಕ್ಕೀಡಾಗಿ ಸತ್ತುಹೋದರೆಂದೇ ಭಾವಿಸಿದ್ದ ಈ ಜನರು ಅವಕ್ಕಾಗಿ ಮೂಗಿನಮೇಲೆ ಬೆರಳಿಡುತ್ತಾರೆ.

ಒಂದು ಉದಾಹರಣೆ ನೋಡಿರಿ. ಎರಡನೇ ವಿಶ್ವಯುದ್ಧದ ವೇಳೆ ಹಿಟ್ಲರ್ ಯುರೋಪಿನಲ್ಲಿ ಕೋಲಾಹಲವನ್ನೇ ಎಬ್ಬಿಸಿಬಿಟ್ಟಿದ್ದ. ಒಂದೊಂದೇ ರಾಷ್ಟ್ರವನ್ನು ಗೆಲ್ಲುತ್ತ ಆತ ಬಿರುಸಿನಿಂದ ಮುಂದುವರಿಯುತ್ತಿದ್ದ. ಇಡೀ ಪ್ರಪಂಚವೇ ನಿರಂಕುಶಾಧಿಕಾರದ ಬಿಗಿಹಿಡಿತಕ್ಕೆ ಸಿಲುಕಿ ವಿಲಿವಿಲಿ ಒದ್ದಾಡುವುದೆಂದು ಎಲ್ಲರಿಗೂ ಮನವರಿಕೆಯಾಯಿತು. ಭಾರತದ ಸ್ಥಿತಿಯಂತೂ ತುಂಬ ವಿಚಿತ್ರ. ಎಲ್ಲರೂ ನಾಜೀವಾದದ ವೈರಿಗಳೇ. ಆದರೆ ಅದರ ವಿರುದ್ಧ ಆಂಗ್ಲರಿಗೆ ನೆರವಾಗಲು ಸಾಧ್ಯವಿರಲಿಲ್ಲ. ನಮ್ಮ ಧುರೀಣರ ಮನಃಸ್ಥಿತಿ ಅವರ್ಣನೀಯ. ಜ್ಞಾನ ವಿಜ್ಞಾನಗಳಿಂದ ತುಂಬಿದ ಅವರ ಮೆದುಳಿಗೆ ಏನೂ ಹೊಳೆಯುತ್ತಿರಲಿಲ್ಲ. ಅತ್ತ ಹುಲಿ, ಇತ್ತ ನರಿ— ಎಂಬಂತಾಯಿತು ಅವರ ಸ್ಥಿತಿ. ಆದರೆ ಗಾಢಾಂಧಕಾರದಲ್ಲೂ ಬೆಳಕು ತೋರಿಸುವವನೇ ಸೇನಾಪತಿಯಲ್ಲವೇ ? ತಕ್ಕ ವೇಳೆಯಲ್ಲಿ ಅವನ ಬಾಯಿಯಿಂದ "ಭಾರತ ಬಿಟ್ಟು ತೊಲಗಿರಿ" (Quit India) ಎಂಬ ಗಂಭೀರ ಘೋಷಣೆ ಹೊರಟಿತು. ಅಂಥ ವೇಳೆ, ಅವನ ಬಾಯಿಯಿಂದ ಆ ಮಾತು ಹೊರಡದೆ ಹೋಗಿದ್ದರೆ ಭಾರತ ಇಂದೂ ಗುಲಾಮಗಿರಿಯಲ್ಲೇ ತೊಳಲಾಡುತ್ತಿರಲಿಲ್ಲವೆ ?

ಇತಿಹಾಸದ ಇನ್ನೊಂದು ಘಟನೆ ನೋಡಿರಿ, ನೆಪೋಲಿಯನ್ ಸೇನೆ ವಿಜಯಾಭಿಯಾನಕ್ಕೆ ಹೊರಟಿದೆ. ಎದುರಿಗೆ ಆಲ್ಪ್ಸ್ ಪರ್ವತ ತಲೆಯೆತ್ತಿ ನಿಂತಿದೆ. ಸೇನೆ ಹಾಗೂ ಸೇನಾನಾಯಕರ ಬುದ್ಧಿಗೆ ಏನೂ ತೋಚುತ್ತಿಲ್ಲ. 'ಮುಂದೇನು' ಎಂದೇ ಅದು ಸಹಾಸವಾಗಿ ಪ್ರಶ್ನಿಸುತ್ತಿದೆ.

'ಮುಂದುವರಿಯಿರಿ....ಆಲ್ಪ್ಸ್ ದಾಟಿರಿ !'— ಎಂದ ನೆಪೋಲಿಯನ್.

'ಇದು ಅಸಂಭವ'— ಯಾರೋ ನುಡಿದರು.

'ಅಸಂಭವ ಶಬ್ದ ಹೇಡಿಗಳ ಕೋಶದಲ್ಲಷ್ಟೇ ಇರುತ್ತದೆ'—ಎನ್ನುತ್ತ ನೆಪೋಲಿಯನ್ ಸ್ವತಃ ತನ್ನ ಕುದುರೆಯನ್ನು ಮುಂದೆ ಓಡಿಸಿದ. ಅವನ ದೃಢನಿರ್ಧಾರಕ್ಕೆ ಆಲ್ಪ್ಸ್ ಮಣಿಯಲೇಬೇಕಾಯಿತು.

ನಮಗೆ ಈ ಘಟನೆಯೇನೊ ನೆನಪಿದೆ. ಆದರೆ ಪ್ರತಿಯೊಬ್ಬನ ಬದುಕಿನಲ್ಲೂ ಆಲ್ಪಸ್ ಬರುತ್ತದೆಂಬ ವಿಚಾರವನ್ನು ನಾವು ಸಹಜವಾಗಿಯೇ ಮರೆತುಬಿಡುತ್ತೇವೆ. ನಾವು ಆ ಆಲ್ಪಸ್‌ನ್ನು ಕಂಡು ಅಳುಕುತ್ತೇವೆ, ಕಂಗೆಟ್ಟು ಕುಳಿತುಬಿಡುತ್ತೇವೆ, ಇಲ್ಲವೇ ಅದನ್ನು ದಾಟುವ ವಿಸ್ತೃತ ಯೋಜನೆ ತಯಾರಿಸುವುದರಲ್ಲೇ ಮಗ್ನರಾಗುತ್ತೇವೆ..... ಮುಂದೆ ಯೋಜನೆಗಳಿಲ್ಲ ಇದ್ದಲ್ಲೇ ಇರುತ್ತವೆ.... ಆಲ್ಪಸ್ ಮಾತ್ರ ಅಭಿಮಾನದಿಂದ ತಲೆಯೆತ್ತಿ ಮುಗುಳ್ನಗುತ್ತದೆ.

ದೊಡ್ಡ ದೊಡ್ಡ ಯೋಜನೆಗಳನ್ನು ರೂಪಿಸುವ ಮಿದುಳು ನಿಜಕ್ಕೂ ಧನ್ಯ. ಯೋಜನೆ ನಿರ್ಮಿಸುವ ಪುರುಷಪುಂಗವರೂ ಧನ್ಯರೇ. ಅವರು ಯೋಜನೆ ತಯಾರಿಸಿ ಅವುಗಳಂತೆ ನಡೆದು ಗುರಿ ಮುಟ್ಟುತ್ತಾರೆ. ಆದರೆ ಇದೇನೂ ಸುಲಭಕಾರ್ಯವಲ್ಲ. ನಡುನಡುವೆ ಕಠಿಣ ಸಮಸ್ಯೆಗಳು ಬಂದೊದಗುತ್ತವೆ. ಅವಕ್ಕೆ ತಕ್ಕ ವೇಳೆಯಲ್ಲಿ ಪರಿಹಾರ ಕಂಡುಹಿಡಿಯದಿದ್ದರೆ ಯೋಜನೆಗಳಷ್ಟೇ ಕೊನೆಗೊಳ್ಳುವುದಿಲ್ಲ—ಅವುಗಳ ನಿರ್ಮಾಪಕರೂ ಕೊನೆಗೊಳ್ಳುತ್ತಾರೆ.

'ಈ ೧೧ನೇ ತಾಸಿನಲ್ಲಿ ಏನು ಮಾಡಲು ಸಾಧ್ಯ ?'–ಎಂದು ಜನ ಆಗಾಗ್ಗೆ ನಿರಾಶೆಯಿಂದ ಹೇಳುವುದುಂಟು. ಇಂಥ ಜನರೆಂದರೆ ನನಗೆ ಎಲ್ಲಿಲ್ಲದ ಸಿಟ್ಟು. ೧೧ನೇ ತಾಸೇ ಅತಿ ಮಹತ್ವದ ವೇಳೆಯೆಂಬುದನ್ನು ಇವರರಿಯರು. ೧೧ನೇ ತಾಸಿನಲ್ಲಿ ಕೆಲಸಮಾಡುವ ಬುದ್ಧಿ ನಿಮಗಿರದಿದ್ದರೆ, ಹಿಂದಿನ ೧೦ ತಾಸುಗಳ ಕೆಲಸವೂ ವ್ಯರ್ಥವಾದಂತೆ. ೧೦ ತಾಸುಗಳು ಎಲ್ಲರಿಗೂ ಸೇರಿವೆ. ೧೧ನೇ ತಾಸು ಪ್ರತಿಭಾಶಾಲಿಗೆ ಸೇರಿದುದು. ಕತ್ತೆ ಕುದುರೆಗಳ ಅಂತರ ಸ್ಪಷ್ಟವಾಗುವ ವೇಳೆ ಇದೇ. ಮಿಡಿಓಕರ್ ಹಾಗೂ ಜೀನಿಯಸ್ ವ್ಯತ್ಯಾಸ ತೋರುವ ಕಾಲ ಇದೇ.

ಮನುಷ್ಯನ ಪರಿಚಯ ಇಂಥ ವೇಳೆಯಲ್ಲೇ ಆಗುತ್ತದೆ. ನಿಮ್ಮಲ್ಲಿ ಬುದ್ಧಿ, ಜಾಣ್ಮೆ ಹಾಗೂ ಪ್ರತಿಭೆಯಿದ್ದರೆ ೧೧ನೇ ತಾಸಿನಲ್ಲೇ ಅದು ಬೆಳಕಿಗೆ ಬಂದೀತು. ಎಂತಹ ಕಠಿಣ ಸಮಸ್ಯೆಯೂ ಅವರೆದುರು ನಿಲ್ಲಲಾರದು.

ಆದರೆ ನಮ್ಮಲ್ಲಿ ಮಿಡಿಓಕರರೇ ಹೆಚ್ಚೆಂಬುದನ್ನು ನಾನೊಪ್ಪುತ್ತೇನೆ. ಪರಂಪರಾಗತ ಮಾರ್ಗದಲ್ಲಿ ಎಚ್ಚರಿಕೆಯಿಂದ ಸಾಗುತ್ತ ಯಾವುದೇ ಗಂಡಾಂತರಕ್ಕೆ ಸಿಲುಕದೆ ಒಂದೊಂದೇ ಮೆಟ್ಟಲು ಹತ್ತಿ ಮೇಲೇರುವ ಜಾತಿಯಿದು. ಇವರು ಜೀನಿಯಸ್‌ರನ್ನು ಕಂಡು ನಗುತ್ತಾರೆ. ತಕ್ಕ ಅವಕಾಶಕ್ಕಾಗಿ ಕಾದು ಕುಳಿತಿರುವ ಜೀನಿಯಸ್ ಆ ವೇಳೆ ಕೆಳಗೇ ಉಳಿದಿರುತ್ತಾನೆ. ಆದರೆ ಇಂಥ ಜೀನಿಯಸರೇ ಆಯಕಟ್ಟಿನ ವೇಳೆ ನೆರವು ನೀಡಿ ದೇಶವನ್ನು ಉದ್ಧಾರಮಾಡಿದ್ದಾರೆಂದು ಇತಿಹಾಸ ಹೇಳುತ್ತದೆ. ಈ ಪ್ರಯತ್ನದಲ್ಲಿ ಅಪಘಾತಕ್ಕೀಡಾಗಿ ಅವರು ಹುತಾತ್ಮರಾದರೂ ಅವರ ಎಲುಬಿನಿಂದ ದೀವಟಿಗೆ ತಯಾರಿಸಿ ಅವರ ಅನುಯಾಯಿಗಳು ತಮ್ಮ ಗುರಿ ಮುಟ್ಟಿದ್ದಾರೆಂದೂ ನಾವು ಬಲ್ಲೆವು.

ಹಾಗೆಂದು ತಕ್ಕ ವೇಳೆ ಬರಲೆಂದು ನಾವು ಕೈ ಕಟ್ಟಿ ಕುಳಿತಿರಬಾರದು. ಏಕೆಂದರೆ ಅಂತಹ ವೇಳೆ ಮುನ್ಸೂಚನೆ ನೀಡಿ ಬರುವುದಿಲ್ಲ. ನಮ್ಮ ಪ್ರಯತ್ನ ನಡೆಸುತ್ತಲೇ ಇರಬೇಕು. ಸದವಕಾಶ ಬರುತ್ತಲೇ ಅದನ್ನು ಬಳಸಿಕೊಳ್ಳಬೇಕು.

ಉದಾಹರಣೆಗೆ ಫುಟ್‌ಬಾಲ್ ಆಟನೋಡಿರಿ. ಒಂದೆಡೆ ಚೆಂಡು ಹೊರಟಿತು. ಆಟಗಾರರು ಒಟ್ಟಾಗಿ ಎದುರಾಳಿ ತಂಡದ ಗೋಲಿನ ಬಳಿಗೆ ಒಯ್ಯುತ್ತಾರೆ. ಆದರೆ ತಕ್ಕ ವೇಳೆಯಲ್ಲಿ ಸರಿಯಾಗಿ 'ಕಿಕ್' ಹೊಡೆಯುವವನು ಇಲ್ಲದೆ ಹೋದರೆ ಅವರ ಪ್ರಯತ್ನ ವ್ಯರ್ಥ. ತಂಡದ ಭವಿಷ್ಯ ಇಂಥ ವ್ಯಕ್ತಿಯನ್ನೇ ಅವಲಂಬಿಸಿದೆ. ಒಂದು ತಂಡದಲ್ಲಿ ಅಂಥಹ ಒಬ್ಬಿಬ್ಬರು ಮಾತ್ರ ಇರುತ್ತಾರೆ. ಆದರೆ ಅಂತಹ ವ್ಯಕ್ತಿಗಳನ್ನು ಪಡೆಯದ ತಂಡ ಯಾವಾಗಲೂ ಸೋಲುತ್ತಲೇ ಇರಬೇಕಾಗುತ್ತದೆ.

ಸ್ಕೋರ್ ಗಳಿಸುವುದು ಒಂದು ಚಾನ್ಸ್.... ನಾವು ಕಷ್ಟಪಟ್ಟು ಚೆಂಡನ್ನು ಇಲ್ಲಿಯವರೆಗೆ ತಂದೆವು. ಆತ ಒಂದು ಸಲ ಕಿಕ್ ಹೊಡೆದಾಕ್ಷಣ ಆಟದ ಕೀರ್ತಿ ಅವನಿಗೆ ಸಿಗಬೇಕೇ' ?— ಎಂದು ಉಳಿದ ಆಟಗಾರರು ಹೇಳಿದರೆ ಅವರು ತಿಳಿಗೇಡಿಗಳೆನ್ನಬಹುದು. ಏಕೆಂದರೆ ಹೊಡೆದ ಕ್ಷಣವೇನೋ ಬಲು ಸಣ್ಣದಾದರೂ ಅದನ್ನು ಸಾಧಿಸುವುದರಲ್ಲಿ ಅವನು ವರ್ಷಗಟ್ಟಲೆ ಮಾಡಿದ ಸಾಧನೆಯ ಫಲ ಕ್ಷಣಕಾಲದಲ್ಲಿ ದೊರೆಯಿತು. ಈ ಹಿನ್ನಲೆ

ಯನ್ನರಿಯದೆ ಅದು ಬರೀ ಆಕಸ್ಮಿಕವೆನ್ನುವುದು ತಪ್ಪು.

೧೧ ನೇ ತಾಸಿನಲ್ಲಿ ಕೆಲಸ ಮಾಡಲು ಸಾಮಾನ್ಯರಿಂದ ಸಾಧ್ಯವಿಲ್ಲ. ೧೧ ನೇ ತಾಸಿನ ಸಿದ್ಧತೆಯನ್ನು ಬರೀ ಒಂದು ತಾಸಿನಲ್ಲಿ ಮುಗಿಸಿ ಬಿಡಲು ಅಸಾಧಾರಣ ಯೋಗ್ಯತೆ ಬೇಕು. ಒಂದಿಷ್ಟು ಗಾಬರಿಯಾಯಿತೆಂದರೆ ಕೆಲಸ ಕೆಟ್ಟು ಹೋಗುತ್ತದೆ.

ಆದರೆ ತಕ್ಕ ವೇಳೆಯಲ್ಲಿ ಕೆಲಸ ಮಾಡುವುದು ಒಂದು ಕಲೆ. ಇತರ ಕಲೆಗಳಂತೆ ಇದೂ ಮನೋರಂಜನೆ ನೀಡಬಲ್ಲುದು. ಆತ ತನ್ನೆಲ್ಲ ಶಕ್ತಿಗಳನ್ನು ಕ್ರೋಢೀಕರಿಸಿ ಮೌನವಾಗಿ ಕೆಲಸ ಸಾಧಿಸುತ್ತಾನೆ. ಇತರರು ಕಣ್ ಕಣ್ ಬಿಡುವುದನ್ನು ಕಂಡು ಹಿಗ್ಗುತ್ತಾನೆ. ಮನುಷ್ಯ ಕರ್ತೃತ್ವಶಕ್ತಿ ಇಂಥ ವೇಳೆಯಲ್ಲೇ ಹೊರಹೊಮ್ಮುತ್ತದೆ.

ಈ ಬಗ್ಗೆ ಇನ್ನೊಂದು ಉದಾಹರಣೆ ನೋಡಿರಿ. ಅಲೆಗ್ಸಾಂಡರ್‌ನ ಸೇನೆ ಮಿಸ್ರದಲ್ಲಿ ಹೋರಾಡುತ್ತಿತ್ತು. ನಾಜೀಸೇನೆ ಅದನ್ನು ಹಿಂಬಾಲಿಸುತ್ತಿತ್ತು. ಒಮ್ಮೆ ಎಲ್ಲ ಮದ್ದು ಗುಂಡುಗಳೂ ಮುಗಿದು ಹೋದವು. ಈಗೇನು? ಆತ್ಮ ಸಮರ್ಪಣೆಯೆ ? ಸೈನಿಕರಿಗೆ 'ಆತ್ಮ ಸಮರ್ಪಣೆ' ಎಷ್ಟೊಂದು ಅಪಮಾನಕರ ಎಂದು ಎಲ್ಲರೂ ಬಲ್ಲರು.

ಅಲೆಗ್ಸಾಂಡರನ ಮೆದುಳಿನಲ್ಲಿ ತಕ್ಕ ವೇಳಗೆ ಒಂದು ಉಪಾಯ ಮೂಡಿತು. ತೋಪುಗಳಲ್ಲಿ ಸಿಡಿಮದ್ದುಗಳ ಬದಲು ಉಸುಕು ತುಂಬಿ ಹಾರಿಸಿರಿ !ಎಂದ ತೋಪುಗಳು ಒಂದೇ ಸಮನೆ ಉಸುಕು ಉಗುಳ ತೊಡಗಿದವು. ಅದರ ಮರೆಯಲ್ಲೇ ಅಲೆಗ್ಸಾಂಡರ್‌ನ ಸೈನ್ಯ ಹಿಂದೆ ಹಿಂದೆ ಸರಿದು ಸುರಕ್ಷಿತ ಸ್ಥಾನ ಸೇರಿತು. ಕಟ್ಟಕಡೆಗೆ ನಾಜೀ ಸೇನೆ ಅಲ್ಲಿಗೆ ಬಂದಾಗ ಕೆಲವು ಖಾಲೀ ತೋಪುಗಳಲ್ಲದೆ ಬೇರೇನೂ ಸಿಗಲಿಲ್ಲ.

ರಾಜನೀತಿ, ಸಾಹಿತ್ಯ ಕಲೆ- ಈ ಎಲ್ಲ ಕ್ಷೇತ್ರಗಳಲ್ಲೂ ಸಮಯ ಸ್ಫೂರ್ತಿಯ ಹಲವಾರು ಉದಾಹರಣೆಗಳಿವೆ. ನೀವೊಂದು ಕಾದಂಬರಿ ಬರೆಯುತ್ತಿದ್ದೀರಿ, ನಾಟಕ ಇಲ್ಲವೇ ಕವಿತೆ ರಚಿಸುತ್ತಿದ್ದೀರಿ.... ನಡುವೆ ಏನಾದರು ಸಮಸ್ಯೆ ನಿಮಗೊದಗಬಹುದು. ಅಂತಹ ವೇಳೆ ಸರಿಯಾದ ಪರಿಹಾರ ಹೊಳೆಯಿತೆಂದರೆ ನಿಮ್ಮ ಪ್ರಯತ್ನ ಸಫಲವಾದೀತು. ಇಲ್ಲದಿದ್ದರೆ ಇಡೀ ಕೃತಿಯೇ ಕಳಪೆಯೆನಿಸೀತು.

ಆದ್ದರಿಂದ ನಾನು ನನ್ನ ಮಾತನ್ನೇ ಮತ್ತೊಮ್ಮೆ ಹೇಳುವೆ— ಆಯಕಟ್ಟಿನ ವೇಳೆ ದಾರಿ ತೋರಿಸುವುದೇ ನಿಜವಾದ ಬುದ್ಧಿ, ಜಾಣ್ಮೆ ಹಾಗೂ ಪ್ರತಿಭೆ. ಸುದೀರ್ಘ ಸಾಧನೆಯ ಬಳಿಕವೇ ಬುದ್ಧಿಯಲ್ಲಿ ಅಂತಹ ಚಮತ್ಕಾರ ಹಾಗೂ ತೀಕ್ಷ್ಣತೆ ಉಂಟಾಗಬಲ್ಲುದು. —

(ಹಿಂದಿಯಿಂದ)



## ಹಣ್ಣೆಲೆ

—ಶಿವಪುತ್ರ

ಮೆಟ್ಟುತಿಹ ನೀ ಮುದುಕ
ಸಂಜೆಯ ಹೊಸ್ತಿಲನು;
ಜೀವನದ ದಾರಿಯಲಿವನೊಬ್ಬನೇ
ಇರುವ; ಮಕ್ಕಳಿವ ನನಗಲಿಹರು
ಬಾಗುತಿಹನು ಕಷ್ಟಗಳಿಗಿವನು.

ಗಾಳಿ ಬೀಸಿದಾಗ ಗಿಡಬಾಗಿದಂತೆ ।
ಆಸೆ ನಿರಾಶೆಗಳ ತುಮುಲಗಳು
ಬಿಸಿ ನೀರಿನ ಬುಗ್ಗೆಯಂತೆ.

ಕೆನ್ನೆಗಳಲ್ಲಿ ಕಾಣದಿರತಕ್ಕ ಮುಖದಲ್ಲಿ
ತೋರಡಗುವುವು,
ಈ ಮುದುಕನ ಮೌನ
ಶ್ಮಶಾನ ಮೌನದಂತಿಹುದು
ಈತನ ತ್ಯಾಗ
ಕರ್ಣನ ತ್ಯಾಗದಂತಿಹುದು.
ಇಂದೊ, ನಾಳೆಯೋ ಎನ್ನುವ
ಈತನ ಸ್ಥಿತಿ
ಮಳೆಯಿಲ್ಲದೆ ಬಾಡುವ
ಪೈರಿನಂತಿಹುದು.
ಈ ಹಣ್ಣೆಲೆಯ ವಿಚಾರಿಸುವರಾರು ?
ರವಿ ಬೆಳಕಿನ ಚಿಗುರೆಲೆಗಳು ಹೊಳೆದಾಗ ! ?

ಸಿದ್ಧಗಂಗಾ

## ಸೋತ ಭೂ ತಾಯಿ

—ಎಸ್. ಮಲ್ಲಿಕಾರ್ಜುನ.

ಓ ವರುಣದೇವನೇ ಶರಣು ನಿನಗೆ
ಕರಮುಗಿದು ಕರೆಯುವೆ ನಾನು ಸೋತು
ಜಗದ ಜನರ ತಪ್ಪಿಗಾಗಿ
ನನ್ನ—ನನ್ನ ಮಕ್ಕಳ ಮನವ ನೋಯುಸುತಿಯೇಕೆ?

ಮುಖವ ತೊಳೆಯಲು ನೀರು ನೀಡಿದೆ
ತಂಬಿಗೆ ತುಂಬಿ—
ಅನ್ನನೀಡಿ ಅಪ್ಪಣೆ ಮಾಡಿರುವಿ ಉಣ್ಣಲೆಂದು
ತಿನ್ನಲು ಕುಳಿತಿರುವೆ ಒಪ್ಪಿ ಆಗಲೆಂದು.
ಅತ್ತು ಅತ್ತು ತುತ್ತನ್ನಿಡುವನಾ ನನ್ನ ಮಗ
ಬಾಯ್ಬತ್ತುವದು ಉಣ್ಣು....ಉಣ್ಣು ಅ....ಮ್ಮಾ

ಬೇಗ ಉಂಡು ಮೊಲೆ ಹಾಲನ್ನು ಕುಡಿಸು
ನಿನ್ನ ಕಂದಗಳಿಗೆಂದು
ನಂಬಿ ನುಂಗುತ್ತಿರುವೆ ದಿನವಿಡಿ
ತುತ್ತುಗಳೊಂದೊಂದು
ತಪ್ಪಿದರೆ ತಂಬಿಗೆಯಲ್ಲುಂಟು
ನೀರೆಂದು.

ಬರೀ ಬಿಸಿಯನ್ನ ಉಂಡು
ಬಾಯ್ಬಿಸಿಯಾಗಿದೆ
ಹಸಿವು ಹಿಂದಾಗದು
ಬೇಕು ಅನ್ನದೊಡನೆ ನಿನ್ನ ಸಾರ....!

ಮತ್ತೆ ಮತ್ತೆ ಬೇಡುವೆ ನಿನ್ನ
ಹಸಿ ಆರಿದ ಹಸಿದ ನೆಲ ನಾನ
ತುತ್ತು ನೆತ್ತಿಗಾರುವ ಮುನ್ನ
ಬೇಗ ಬರುಕು ಬಾಯಿಗೆ ನೀರನ್ನ
"ಕ್ಷಮಯಾ ಧರೆ ಹೌದು !" ನಾನಾ—

ತಾಳ್ಮೆ ಮೀರಿ ಕಂದನಿಗಾಗಿ
ಕೇಳುತಿರುವೆ
ಕೀಳ ಜನರ ಬಾಳಿಗಾಗಿ
ನನ್ನನ್ನೇಕೆ ನೋಯಿಸುತಿರುವೆ ?

—

# ದೈವ ಕೃಪೆ ಗಳಿಸಲು....... ಸ್ವಪ್ರಯತ್ನ ಸಹಾಯಕವೇ ?

—ಹೆಚ್. ಜಿ. ರಾಧಾದೇವಿ.

ಸಾಮಾನ್ಯವಾಗಿ ಬದುಕಿನಲ್ಲಿ ಅನೇಕ ಕಷ್ಟಗಳಲ್ಲಿ ಮನುಷ್ಯ ದೈವ ಕೃಪೆಗಾಗಿ ಹಾತೊರೆಯುತ್ತಾನೆ. ಮಾನವ ತನ್ನ ಜೀವನದಲ್ಲಿ ಪಡೆವ ಯಶಸ್ಸಿಗೂ, ಅವನ ಆಸೆಗಳು ನೆರವೇರಲಿಕ್ಕೂ ಕೆಲವೊಮ್ಮೆ ದೈವದ ಸಹಾಯವೇ ಪ್ರಧಾನವಾಗಿರುತ್ತದೆ.

ಆದರೆ ದೈವ ಸಹಾಯವನ್ನೇ ನಂಬಿ ಕೂಡುವುದು ಯೋಗ್ಯವೆ? ದೈವ ಸಹಾಯ ಯಾಚಿಸುತ್ತ ತನ್ನ ಸ್ವಪ್ರಯತ್ನವನ್ನು ಅದಕ್ಕೆ ಬೆರಸಬಾರದೇಕೆ....? ಕೂಡದೂ ಎನ್ನುತ್ತದೆ ಮಹಾಭಾರತ. ಇದನ್ನೇ ಅನುಮೋದಿಸುತ್ತದೆ ಭಾಗವತ, ಈ ಎರಡೂ ಕಥಾನಕಗಳಿಂದ ಒಂದೊಂದು ಉದಾಹರಣೆ ಪರಿಶೀಲಿಸುವಾ....

ತುಂಬಿದ ಸಭೆಯಲ್ಲಿ ದ್ರೌಪದಿಯ ಸೀರೆ ಸೆಳೆಯುತ್ತಿದ್ದಾನೆ ದುಶ್ಯಾಸನ... ಪತಿಗಳ, ಬಂಧು ಬಾಂಧವರ, ಸಭಿಕರ ಸಹಾಯ ಯಾಚಿಸಿ ಸೋತ ಪಾಂಚಾಲಿ ಕಡೆಗೆ ಅಣ್ಣ ಭಗವಾನ್ ಶ್ರೀ ಕೃಷ್ಣನ ಸಹಾಯಕ್ಕೆ ಕೂಗಿ ಮೊರೆ ಇಡುತ್ತಾಳೆ.

ಪಾಂಚಾಲಿ ಬಗೆ ಬಗೆಯಾಗಿ ಭಗವಂತನಿಗೆ ಮೊರೆ ಇಟ್ಟರೂ ಕೃಷ್ಣ ಕೃಪೆ ದೊರೆಯಲಿಲ್ಲ. ಕಡೆಗೆ ಬೇಸತ್ತು ದ್ರೌಪತಿ ಎರಡು ಕೈಗಳನ್ನು ಮೇಲೆತ್ತಿ 'ಅಣ್ಣಾ ಕೃಷ್ಣಾ ಕಾಯ್ದರೂ ನೀನೆ ಕೈ ಬಿಟ್ಟರೂ ನೀನೆ..." ಎಂದು ಶರಣಾಗುತ್ತಾಳೆ...... ಒಡನೆಯೇ ಅಕ್ಷಯ ವಸ್ತ್ರಗಳ ಸುರಿಮಳೆ.

ಸೀರೆ ಸೆಳೆದು, ಸೆಳೆದು ದುಶ್ಯಾಸನನೇ ಸೋತು ಒರಗುತ್ತಾನೆ. ಅವಳ ಹಿಮ್ಮಡಿಯಂಚನ್ನು ಸಹ ಸಭಿಕರು ಕಾಣಲಾಗಲಿಲ್ಲ, ಮುಂದಲೆ ಬೈತಲೆ ಮುಚ್ಚಿದ ಸೆರಗನ್ನು ಸರಿಸಲಾಗಲಿಲ್ಲ. ಎಳೆದಷ್ಟು ಆ ಭಾಗ ಮುಚ್ಚಿದ ಮತ್ತೊಂದು ಹೊಸ ಸೀರೆ, ಪಾಂಚಾಲಿಯ ಮಾನಾಭಿಮಾನ ಹೀಗೆ ಕಾಯ್ದ ಕೃಷ್ಣ ತಕ್ಷಣ ದಯೆ ಏಕೆ ತೋರಲಿಲ್ಲ.

ಆಕೆ ಅಷ್ಟೊಂದು ಹಂಬಲಿಸುವರಿಗೂ ಏಕೆ ಸುಮ್ಮನಿದ್ದ ? ಒಮ್ಮೆ ಪಾಂಚಾಲಿ ಕೇಳಿದ ಇದೇ ಪ್ರಶ್ನೆಗೆ ಭಗವಂತ ಈ ರೀತಿ ಉತ್ತರಿಸುತ್ತಾನೆ.

" ನೀನು ಆ ಆಪತ್ತಿನಲ್ಲಿ ಸಿಲುಕಿ ಭಕ್ತಿಯಿಂದ ನನಗೆ ಮೊರೆ ಇಟ್ಟೆ ತಂಗಿ. ಆದರೆ ನಿನ್ನ ಭಕ್ತಿಯಲ್ಲಿ ನಂಬಿಕೆ, ನಿಶ್ಚಲತೆ ಮೂಡುವವರೆಗೆ ನಾನು ಬರಲಾಗಲಿಲ್ಲ. ಎರಡು ಕೈಗಳಿಂದ ಸೆರಗನ್ನು ಗಟ್ಟಿಯಾಗಿ ಬಿಗಿ ಹಿಡಿದು ಸೆರಿಸಾಡುತ್ತ-ಆ ದುಷ್ಟನನ್ನು ನಿವಾರಿಸಲು ಸ್ವಪ್ರಯತ್ನದಿಂದ ಹೋರಾಡುತ್ತ, ಜೊತೆಗೆ ನನ್ನನ್ನು ಪ್ರಾರ್ಥಿಸಿದೆ, ದೈವಕೃಪೆ ನನ್ನನ್ನು ರಕ್ಷಿಸುತ್ತದೆ ಎನ್ನುವುದಾದರೇ ಸ್ವಪ್ರಯತ್ನದ ಸಂಕೋಲೆ ಏತಕ್ಕೆ...... ? ಕಡೆಗೆ ಪರಿಪೂರ್ಣವಾಗಿ ನನ್ನನ್ನು ನಂಬಿ.... ನೀನು ನಿನ್ನ ರಕ್ಷೆಗೆ ಉಪಯೋಗಿಸಿಕೊಂಡ ಆ ವಸ್ತುಗಳನ್ನೇ ಮೇಲೆತ್ತಿ ನನಗೆ ಶರಣಾದೆ. ಆಗ ಪರಿಪೂರ್ಣವಾಗಿ ನನ್ನನ್ನೇ ನಂಬಿದಂತೆ ಆಯಿತು. ಆ ಕ್ಷಣಾ ನಾನು ನಿನ್ನ ಸಹಾಯಕ್ಕೆ ಬಂದೆ. "

ಭಗವಂತನ ಈ ಮಾತಿನಿಂದ ನಮಗೇನು ತಿಳಿದು ಬಂದಂತೆ ಆಯಿತು. ನಿಶ್ಚಲ ಭಗವದ್ ಭಕ್ತಿಗೆ ಸ್ವಪ್ರಯತ್ನ "ಅಡ್ಡಿ" ಎಂದು ಭಗವತ್ ಕೃಪಾ ಪ್ರಸಾದಕ್ಕೆ ಕೈ ಚಾಚುವನು ನಿಶ್ಚಲ ಮನದಿಂದ ಸ್ವಪ್ರಯತ್ನ ತೊರೆದು ಭಗವಂತನಲ್ಲಿ ಶರಣಾಗಿ ಅನನ್ಯ ಭಕ್ತಿಯಿಂದ ಅವನನ್ನೆ ನಂಬಬೇಕೆಂದು ತಿಳಿಯುವುದು.

ಭಾಗವತದ ಒಂದು ಪ್ರಸಂಗಗಳು ಇದನ್ನೇ ಅನುಮೋದಿಸುವುದು. ಗಜರಾಜ ಮೊಸಳೆಯ ಕೈಗೆ

ಸಿಕ್ಕಿಕೊಂಡಾಗ ಒಂದು ದಿವ್ಯ ಸಹಸ್ರ ವರ್ಷ ಭಗವಂತನಿಗೆ ಮೊರೆ ಇಡುತ್ತಾನೆ. ಆದರೆ ಆಗ ಒಂದು ಜೊಂಡನ್ನು ಬಲವಾಗಿ ಬಿಗಿದು .ಸೊಂಡಲಿನಿಂದ ಆಶ್ರಯಿಸಿಕೊಂಡಿರುತ್ತಾನೆ. ಕಡೆಗೆ ಜೀಸತ್ತು ಮೊಸಳೆ ತನ್ನನ್ನು ಎಳೆದೊಯ್ದು ನುಂಗಿದರೂ ಸರಿ.... ಕಾಯ್ದರೆ ನೀನೆ ಕಾಪಾಡು. ಇಲ್ಲದಿದ್ದರೆ ಕೊಲ್ಲು. ಎಂಬ ಭಾವದಿಂದ ಜೊಂಡಿಗೆ ಸುತ್ತಿದ್ದ ಸೊಂಡಿಲನ್ನು ತೆಗೆದು ಮೇಲೆತ್ತಿ "ವೈಕುಂಠ ವಾಸಾ" ಎಂದು ಶರಣಾಗುವಷ್ಟರಲ್ಲಿ ಭಗವಂತ ಪ್ರತ್ಯಕ್ಷ, ಮೊಸಳೆಯನ್ನು ಕೊಂದು ಗಜರಾಜನ ಶಾಪ ಹರೆಸುತ್ತಾನೆ.

ಭಗವಂತ ಬರಲು ತಡ ಮಾಡಿದನೇಕೆ? ಎಂಬ ಪ್ರಶ್ನೆಗೆ ಇಲ್ಲಿಯೂ ಮೊದಲಿನಂತೆ ಉತ್ತರ, ಗಜರಾಜ ಭಗವಂತನನ್ನು ಮನಸಾರ ಕೂಗುತ್ತಿದ್ದರೂ ಜೊಂಡಿನ ಆಶ್ರಯದ ಸ್ವಪ್ರಯತ್ನವನ್ನು ನಡೆಸಿದ್ದ, ಇದೆಲ್ಲಾ ಯೋಚಿಸಿದಾಗ ಒಂದು ಮಾತ್ರ ದಿಟವೆನಿಸುತ್ತದೆ.

ನಿಶ್ಚಲ ಭಕ್ತಿಗೆ ನಿಷ್ಠೆಗೆ ನಂಬಿಕೆಗೆ ಮಾತ್ರ ಭಗವಂತ ಒಲಿಯುತ್ತಾನೆ ಸರಿ ಹಾಗಾದರೆ ಯಾವುದೆ ಕೋರಿಕೆಗೆ ನಾವು ಪೂರ್ಣ ಭಗವಂತನನ್ನೆ ನಂಬಿ ಕೈಕಟ್ಟಿ ಕೂಡಬೇಕೆ....? ಸ್ವಪ್ರಯತ್ನದ ಅಂಶವೇ ಬೇಕಿಲ್ಲವೇ?

ಖಂಡಿತ ಬೇಕು, ಎಂದು ನನ್ನ ವಾದ. ಇದಕ್ಕೊಂದು ಉದಾಹರಣೆ– ಕೆಲವು ಮಂದಿ ಇಂಗ್ಲೀಷ್ ವರ್ತಕರು ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದರಂತೆ ಆಗ ಬಿರುಗಾಳಿಯೆದ್ದು, ಸಮುದ್ರದ ತೆರೆಗಳು ಅಲ್ಲ-ಕಲ್ಲೋಲವಾಯಿತು. ಹಡಗು ರಂಧ್ರವಾಗಿ ಹಡಗಿನಲ್ಲಿ ನೀರು ತುಂಬಲಾರಂಭಿಸಿತು, ಹಡಗಿನಲ್ಲಿದ್ದ ಜನ ಸಾವಿನ ಭೀತಿಯಿಂದ್ಧ ಬೆದರಿ ಕಂಗೆಟ್ಟರು. ಅಲ್ಲೇ ಇದ್ದ ಒಬ್ಬ ದೈವ ಭಕ್ತ ಪ್ರವಾಚಕನನ್ನು ಬೇಡಿದರು. ಹೆದರಬೇಡಿ, ಪಂಪು ಹೊಡೆಯುತ್ತ ಎಲ್ಲರೂ ಒಟ್ಟಾಗಿ ಪ್ರಾರ್ಥಿಸಿರಿ.' ಎಂದನಂತೆ, ನೀರೆತ್ತುವ ನಾಳದಿಂದ ನೀರೆತ್ತಿ ಹೊರಗೆ ಚೆಲ್ಲುತ್ತಾ ಭಗವಂತನನ್ನು ಮನಮುಕ್ತ ಪ್ರಾರ್ಥಿಸಿದರಂತೆ ಪಾರಾದರಂತೆ, (ಆ....ಆಪತ್ತಿನಿಂದ)

ಸಾಮಾನ್ಯ ಮಾನವರಾದ ನಮಗೆ ಈ ಸೂತ್ರ ಸರಿಯೆಂದು ನನ್ನ ನಂಬಿಕೆ. ಹಾಗಾದರೆ ದ್ರೌಪತಿ, ಗಜರಾಜರ ಉದಾಹರಣೆ. ಆಗಿನ ಕಾಲ ಯುಗಕ್ಕೆ ಅವರ ಮಾನಸಿಕ ದೃಢತೆಗೆ ಅದು ಸರಿ, ಆದರೆ ಮನೋದೌರ್ಬಲ್ಯದಿಂದ ನರಳುತ್ತಿರುವ, ನಾಸ್ತಿಕತೆಯ ರೋಗದಲ್ಲಿ ತೊಳಲುತ್ತಿರುವ, ಇಂದಿನ ಜನತೆ ದೃಷ್ಟಿಯಿಂದ ಆಳೆದರೆ..... ?

ಭಗವದ್ ಭಕ್ತಿಯನ್ನು ಸ್ವಪ್ರಯತ್ನವನ್ನು ಬೆರಸಿಯೇ ನಮ್ಮ ಕೋರಿಕೆಗೆ ಹೋರಾಡಬೇಕೆಂದು ನನ್ನೆಣಿಕೆ, ಏಕೆಂದರೆ ನಾವು ಸಾಮಾನ್ಯರು, ಮಹಾತ್ಮರಲ್ಲ ಅವತಾರ ಪುರುಷರಲ್ಲ. ಬಾಳಿನ ಪ್ರತಿಯೊಂದು ವೈಭವಕ್ಕಾಗಿ ಶ್ರಮಿಸುವವರು. ಎಲ್ಲವನ್ನು ತೊರೆದು ಏಕ ಮನಸ್ಸಿನಿಂದ ಭಗವಂತನನ್ನು ನಂಬುವ ಶಕ್ತಿ ನಮಗಿಲ್ಲ, ವೈರಾಗ್ಯವೂ ಇಲ್ಲ.

ಹಾಗಿದ್ದ ಮೇಲೆ ನಮ್ಮ ಬೇಡಿಕೆಯ ಪರಿಪೂರ್ಣ ಭಾರ ಹೊರಲು ಭಗವಂತನೂ ಸಿದ್ಧನಿಲ್ಲ. ಆದರೆ ನಮ್ಮ ಬೇಡಿಕೆಯನ್ನು ಪೂರೈಸಿ ಕೊಳ್ಳಲೂ ನಾವೂ ಶಕ್ತರಲ್ಲ.

ವಿಜ್ಞಾನ ಬೆಳದಿದೆ. ಪ್ರಂಪಚವೇ ಅತಿ ಚಿಕ್ಕದೆಂಬಂತೆ ವೇಗವಾಹನಗಳು ತಯಾರಾಗಿವೇ, ಆದರೂ ಮಾನವ ಸಾವನ್ನು ಗೆದ್ದಿಲ್ಲ. ವಿಚಿತ್ರ ಆದರೂ ಸತ್ಯ ಎಂಬಂಥ ನೈಸರ್ಗಿಕ ಘಟನೆಗಳಿಗೆ ಕಾರಣ ಕಂಡು ಹಿಡಿಯಲಾರ.

ಮಳೆ, ಬೆಳೆ, ಸೂರ್ಯ, ಚಂದ್ರರ ಚಲನೆ ಎಲ್ಲದರ ಮೇಲೆ ನೂರಾರು ವರ್ಷ ಅಭ್ಯಾಸಿಸಿ ದೊಡ್ಡ ದೊಡ್ಡ ಗ್ರಂಥ ಹೊರತರಬಲ್ಲಷ್ಟೆ ಸುಲಭವಾಗಿ–ಪ್ರಕೃತಿಯನ್ನು ಗೆದ್ದು, ಅಥವ ಪ್ರಕೃತಿಯನ್ನು ಮೀರಿ ಬದುಕಲು ಸಾಧ್ಯವಾಗಿಲ್ಲ.

ದೇವರು, ಪ್ರಕೃತಿ, ಈ ನಿಯಮಗಳ ವಿರುದ್ಧ ಸೀಡಿದೇಳಲು ಯತ್ನಿಸಿ ತಾನೆ, ಸೋತಿದ್ದಾನೆ ಮಾನವ. ಆದರೆ ಸೋತನೆಂದು ಒಪ್ಪಿಕೊಳ್ಳಲು ಆತ್ಮಾಭಿಮಾನದ ಅಡ್ಡಿ, ಗೆದ್ದೆನೆಂದು ಸಾರಲು ಮಾನವನಿಗೆ ವಿಜಯ

ಸಿಕ್ಕೆಇಲ್ಲ. ಈ ದ್ವಂದ್ವದಲ್ಲಿ ಸಿಲುಕಿದ್ದ ಮನುಷ್ಯರೀಗಾ ದೈವಭಕ್ತಿ ಮೊರೆ ಹೋಗುತ್ತಿದ್ದಾರೆ.

ಆದರೆ ಚಂಚಲ ಮನಸ್ಸನ್ನು ನಿವಾರಿಸಿಕೊಂಡು ನಮ್ಮ ಹಿಂದಿನವರಂತೆ ದೃಢ ಮನಸ್ಸು ಪಡೆಯಲು ಇನ್ನೊಂದು ಜನ್ಮವೇ ಬೇಕು, ಸದ್ಯಕ್ಕೆ ಈ ದಿಶೆಯಲ್ಲಿ ಕರ್ತವ್ಯೆ, ದೈವಭಕ್ತಿಗಳ ಸಮನ್ವಯವೇ ಬಾಳಿನ ಯಶಸ್ಸಿಗೆ ಕಾರಣವೆಂದು ನನ್ನ ನಂಬಿಕೆ.

---

## ಅಮೇರಿಕಾ

ಭೂಮಿ, ಉದ್ಯಮ ಹೆಚ್ಚು - ದುಃಖಕ್ಕೆ ಕಡಿಮೆಯೇ ?
ಸಾಕ್ಷಿಯಾಗಿದೆಯಲ್ಲ ಅಮೇರಿಕವು
ಸುಖ ದುಃಖಗಳಿಗೆಲ್ಲ ಮನ ಮರ್ಕಟವೇ ಲೆಕ್ಕ
ಮನಸಿನಿಂದಲೇ ಮನುಜನುದ್ಧಾರವು
ಇದನು ಬರೆಯುವ ವೇಳೆ ಪತ್ರಿಕೆಯು
ಬಂತು
ಲೂಥರ್ ಕಿಂಗರು, ಕೆನಡಿಗೇಟು ಬಿತ್ತು.

## ವಿಜ್ಞಾನ

—ಕೆ. ವಿರೂಪಾಕ್ಷಗೌಡ.

ಎರಡು ದಶಕಗಳು ಕಳೆಯಲು ಮತ್ತೆ
ವಿಜ್ಞಾನದ ಬದಲಾವಣೆ ಕಾಣುವುದು
ಮರ್ದನ ಮಾಡುವ ವಿಜ್ಞಾನಿ
" ಮಹತ್ವ ಸ್ಥಾನ ' ನೋಬಲ್ ಪ್ರೈಜು
ಮೀಸೆಯ ಹೊಸೆಯುವ ಹಿರಿಯಮಣಿ
ಇದೆ ಹಳೆಕಥೆವ್ಯಥೆ ಮುಂದೆಯೂಮತ್ತೆ
ಜಗತ್ತಿನ ಜನ ಮತ್ತೆಲ್ಲರೂ ಕತ್ತೆ.

ವಿಜಯಾ ಬ್ಯಾಂಕಿನಲ್ಲಿ

# ನಿಮ್ಮ ವಾಣಿಜ್ಯ ವ್ಯವಹಾರವೇ

# ನ ಮ ಗೆ ಸಂ ತ ಸ



ಹಣ ತೊಡಗಿಸುವ ನಿಮ್ಮ ವ್ಯವಹಾರ ಚಿಕ್ಕದು ಅಥವಾ ದೊಡ್ಡದೇ ಆಗಿರಲಿ, ನಸುನಗೆಯಿಂದ ಶೀಘ್ರವಾಗಿ ಸೇವೆಯಲ್ಲಿ ತೊಡಗುತ್ತೇವೆ.



ಯಾವಾಗಲೂ ನಿಮ್ಮ ತೃಪ್ತಿಯೇ ಮುಖ್ಯಗುರಿಯನ್ನಾಗಿ ಹೊಂದಿರುವ ಏಕೈಕ ಬ್ಯಾಂಕ್ ಎಂದರೆ

# ವಿಜಯಾ ಬ್ಯಾಂಕ್

( ಭಾರತ ಸರ್ಕಾರದ ಒಡೆತನಕ್ಕೆ ಸಂಪೂರ್ಣವಾಗಿ ಸೇರಿದೆ )

ಪ್ರಧಾನ ಕಛೇರಿ

**2**, ರೆಸಿಡೆನ್ಸಿ ರೋಡ್, ಬೆಂಗಳೂರು-**560025**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಮಠ.

LICENCED TO POST WITHOUT PRE PAYMENT LICENCE NO. 3
Registred with theRegistrar of News papers for India under No. 17139/69
Reg No. KRN Q-9